

# ಡಾ. ಜಿ. ಬಿ. ವಿಸಾಜಿ ಅವರ ಬದುಕು - ಬರಹ

( ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ. ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ )


ಸಂಶೋಧಕರು

**ಧನರಾಜ ಎಸ್. ಪಾಟೀಲ**

ಸಂಶೋಧನ ಮಾರ್ಗದರ್ಶಕರು

**ಡಾ. ಈಶ್ವರಯ್ಯ ಮಠ**

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ,

ಬೀದರ







**ವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬**

**ಸೆಪ್ಟೆಂಬರ - ೨೦೦೮**



# ಡಾ. ಜಿ.ಬಿ.ವಿಸಾಜಿ ಅವರ ಬದುಕು–ಬರಹ

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



**ಸಂಶೋಧಕರು**

ಧನರಾಜ ಎಸ್.ಪಾಟೀಲ

ಸಂಶೋಧನ ಮಾರ್ಗದರ್ಶಕರು

**ಡಾ. ಈಶ್ವರಯ್ಯ ಮಠ**

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ





ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬

ಸೆಪ್ಟೆಂಬರ–೨೦೦೮

# ಪ್ರಮಾಣ ಪತ್ರ

"ಡಾ. ಜಿ.ಬಿ.ವಿಸಾಜಿ ಅವರ ಬದುಕು-ಬರಹ" ಎಂಬ ನಿಬಂಧವನ್ನು ಡಾ. ಈಶ್ವರಯ್ಯಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್, ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 15/09/2008

ಧನರಾಜ ಎಸ್. ಪಾಟೀಲ
ಎಂ.ಫಿಲ್ ವಿದ್ಯಾರ್ಥಿ
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ, ಬೀದರ

## ಮಾರ್ಗದರ್ಶಕರ ಪ್ರಮಾಣ ಪತ್ರ

"ಡಾ. ಜಿ.ಬಿ.ವಿಸಾಜಿ ಅವರ ಬದುಕು-ಬರಹ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಧನರಾಜ ಎಸ್. ಪಾಟೀಲ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ :

**ಡಾ. ಈಶ್ವರಯ್ಯ ಮಠ**
ಸಂಶೋಧನ ಮಾರ್ಗದರ್ಶಕರು
ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ
ಸಂಶೋಧನ ಕೇಂದ್ರ, ಬೀದರ

# ಪರಿವಿಡಿ

## ಡಾ. ಜಿ.ಬಿ. ವಿಸಾಜಿ ಅವರ ಬದುಕು–ಬರಹ ಒಂದು ಅಧ್ಯಯನ

ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕನ್ನಡ ಸಾಹಿತ್ಯವು ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಕನ್ನಡ ಸಾಹಿತ್ಯವು ಅತ್ಯಂತ ಪ್ರಾಚೀನ ಸಾಹಿತ್ಯ ಪರಂಪರೆಗಳಲ್ಲಿ ಒಂದಾಗಿದೆ. ಕನ್ನಡ ಸಾಹಿತ್ಯ ಅತ್ಯಂತ ಸಂಪದಬ್ಭರಿತವಾಗಿದೆ. ತನ್ನ ಶ್ರೇಷ್ಠತೆ ಮತ್ತು ಪ್ರಾಚೀನತೆಯಿಂದ ತನ್ನದೆ ಆದ ವಿಶಿಷ್ಟ ಕೊಡುಗೆಯನ್ನು ನೀಡಿದುದ್ದರಿಂದ ಈಗ ಕೇಂದ್ರ ಸರ್ಕಾರ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ಮಾನ ಕೊಡುವ ನಿಟ್ಟಿನಲ್ಲಿ ಕನ್ನಡ ಸಾಹಿತ್ಯವನ್ನು ಪಂಪಪೂರ್ವಯುಗ, ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ ಮತ್ತು ಅರ್ವಾಚೀನಯುಗವೆಂದು ವಿಂಗಡಿಸಲಾಗಿದೆ. ಒಂದೊಂದು ಸಾಹಿತ್ಯ ಯುಗವು ಒಂದೊಂದು ಸ್ವತಂತ್ರ ಪ್ರವಾಹದಂತೆ ಭೋರ್ಗರೆದು ಮುಂದುವರೆದಿವೆ.

ಹೊಸಗನ್ನಡ ಸಾಹಿತ್ಯ ಹಿಂದಿನ ನಮ್ಮ ಸಾಹಿತ್ಯ ಪರಂಪರೆ ಅರಗಿಸಿಕೊಂಡು ಪಾಶ್ಚಾತ್ಯ ಸಾಹಿತ್ಯದ ಪ್ರಭಾವವನ್ನು ಪಡೆದು ಕಾವ್ಯ, ಸಣ್ಣಕಥೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ ಮುಂತಾದ ಪ್ರಕಾರಗಳಲ್ಲಿ ಭರದಿಂದ ಮುಂದೆ ಸಾಗಿದೆ. ಆಧುನಿಕ ಸಾಹಿತ್ಯದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಮತ್ತು ದಲಿತ ಹಾಗೂ ದಲಿತೋತ್ತರ ಸಾಹಿತ್ಯದ ನಿರ್ಮಾಣ ಹುಲುಸಾಗಿ ನಡೆದಿವೆ.

ಹೈದ್ರಾಬಾದ ಕರ್ನಾಟಕ ಪ್ರದೇಶ ಮೊದಲಿನಿಂದಲು ಜನಪದ ಸಾಹಿತ್ಯದ ಗಣಿಯಾಗಿದೆ. ಈ ಭಾಗ ಜೈನರ ಕಾವ್ಯದ, ಶರಣರ ವಚನದ, ದಾಸರ ಹಾಡಿನ, ನೆಲೆಬೀಡಾಗಿದೆ. ಆದರೆ ಅನೇಕ ವರ್ಷಗಳ ಕಾಲ ಈ ಭಾಗ ನಿಜಾಮನ ಆಡಳಿತಕ್ಕೆ ಒಳಪಟ್ಟದ್ದರಿಂದ, ಶಿಕ್ಷಣ ಸೌಲಭ್ಯಗಳಿಂದ ವಂಚಿತವಾಗಿದುದ್ದರಿಂದ ಆಡಳಿತ ಭಾಷೆ ಉರ್ದು ಮತ್ತು ಮರಾಠಿಯಾಗಿದುದ್ದರಿಂದ ಈ ಭಾಗದಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಅಡೆತಡೆ ಉಂಟಾಗಿದೆ. ಭಾರತ ದೇಶ ಸ್ವತಂತ್ರವಾಗಿ, ಹೈದ್ರಾಬಾದ ಕರ್ನಾಟಕ ಪ್ರದೇಶ ಭಾರತ ಒಕ್ಕೂಟಕ್ಕೆ ಸೇರ್ಪಟ್ಟು, ಕರ್ನಾಟಕ ಏಕೀಕರಣದಿಂದ ಮೊದಲು ಮೈಸೂರು ರಾಜ್ಯದಲ್ಲಿ ಸೇರಿ ನಂತರ ಕರ್ನಾಟಕ ರಾಜ್ಯವೆಂದು ನಾಮಕರಣಗೊಂಡು ಈಗ ಸಮೃದ್ಧ ಕರ್ನಾಟಕದತ್ತ ಸಾಗುತ್ತಿದೆ.

ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ ಎಂ.ಫಿಲ್ ವಿದ್ಯಾರ್ಥಿಯಾದ ನಾನು ಅಭ್ಯಾಸ ಮಡುತ್ತಿದ್ದೇನೆ. ಈ ಸಂದರ್ಭದಲ್ಲಿ ಬೀದರ ಜಿಲ್ಲೆಯ ಹಿರಿಯ ಸಾಹಿತಿಗಳಾದ ಮತ್ತು ಗಡಿಭಾಗದಲ್ಲಿ ಸದಾಕಾಲ ಕನ್ನಡವನ್ನು ಉಳಿಸಿ ಬೆಳೆಸುವುದಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟು ಯಾವಾಗಲು ಕನ್ನಡದ ಚಟುವಟಿಕೆಗಳಲ್ಲಿ ಕಾರ್ಯಕಲಾಪಗಳಲ್ಲಿ ಭಾಗಿಯಾಗುವ

ಸಾಹಿತಿ ಶ್ರೀ ಡಾ. ಜಿ.ಬಿ. ವಿಸಾಜಿ ಅವರ ಬದುಕು ಬರಹದ ಬಗ್ಗೆ ಅಧ್ಯಯನ ಕೈಗೊಳ್ಳುವುದು ಸೂಕ್ತ ಎಂದೆನಿಸಿತು. ಈ ವಿಚಾರವನ್ನು ನಮ್ಮ ಎಂ.ಫಿಲ್ ಮಾರ್ಗದರ್ಶಕರ ಮುಂದಿಟ್ಟಾಗ ಒಪ್ಪಿಗೆ ಸೂಚಿಸಿದರು. ಈ ವಿಷಯದ ಬಗ್ಗೆ ಅಧ್ಯಯನ ಮಾಡಲು ನಮ್ಮ ಸಂಶೋಧನ ಅಧ್ಯಯನ ಕೇಂದ್ರದ ನಿರ್ದೇಶಕರು ಕೂಡ ಒಪ್ಪಿಗೆ ಸೂಚಿಸಿದರು.

ಬೀದರ ಜಿಲ್ಲೆಯ ಗಡಿ ತಾಲ್ಲೂಕಾ ಭಾಲ್ಕಿಯಲ್ಲಿ ಸದಾ ಕನ್ನಡದ ಚಟುವಟಿಕೆಗಳಲ್ಲಿ ಭಾಗಿಯಾಗುವ ಡಾ. ಜಿ.ಬಿ.ವಿಸಾಜಿ ಅವರ ಬಗ್ಗೆ ಅಧ್ಯಯನ ಮಡುವುದು ನನಗೆ ತುಂಬ ಹೆಮ್ಮೆಯ ವಿಷಯವಾಗಿದೆ. ಇವರು ತುಂಬ ಸರಳ ಜೀವಿಯಾಗಿದ್ದಾರೆ. ಜೀವಪರ, ಸಮಾಜಪರ, ಸಾಕಷ್ಟು ಕಳಕಳಿಯನ್ನು ಹೊಂದಿದ್ದಾರೆ. ಭಾಲ್ಕಿಯ ಮರಾಠಿ ಭಾಷಿಕರ ವಿರೋಧದ ನಡುವೆಯು ಅನೇಕ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ "ಕನ್ನಡದ ಜೈಕಾರ" ಹಾಕಿದವರಾಗಿದ್ದಾರೆ.

ಕನ್ನಡ ನಾಮಫಲಕ ಆಂದೋಲನ ಕನ್ನಡದ ಯಾವುದೇ ಕಾರ್ಯಕ್ರಮ ಇದ್ದಲ್ಲಿ ಡಾ. ಜಿ.ಬಿ.ವಿಸಾಜಿ ಅವರು ಹಾಜರಿರುತ್ತಾರೆ. ಅದರಲ್ಲಿ ಭಾಲ್ಕಿಯಲ್ಲಂತು ಅವರಿಲ್ಲದೆ ಕಾರ್ಯಕ್ರಮವೇ ಇರುವುದಿಲ್ಲ. ಪ್ರತಿಯೊಬ್ಬರ ಬಾಯಲ್ಲಿ ವಿಸಾಜಿ ಎಂಬಂತೆ ಜನಜನಿತರಾಗಿದ್ದಾರೆ. ಗೋಕಾಕ ಚಳುವಳಿ, ಮಹಿಷಿವರದಿ ಮುಂತಾದ ಕನ್ನಡ ಪರ ಚಳುವಳಿಗಳನ್ನು ಬೆಂಬಲಿಸಿದರು.

ಭಾಲ್ಕಿಯಲ್ಲಿ ಕನ್ನಡ ಸಾಹಿತ್ಯ ಬೆಳೆಸಲು ಡಾ. ಜಿ.ಬಿ. ವಿಸಾಜಿ ಅವರು ವಿದ್ಯಾರ್ಥಿಗಳ ಮನದಲ್ಲಿ ಕನ್ನಡ ನಾಡು ನುಡಿಯ ಬಗ್ಗೆ ಪ್ರೇಮ ಗೌರವ, ಮೂಡುವಂತಹ ಸಾಂಸ್ಕೃತಿಕ ಚಟುವಟಿಕೆಗಳನ್ನು ಮೊಟ್ಟಮೊದಲು ಮಾಡಿದರು. ಭಾಲ್ಕಿ ಎಂದರೇ ಧಾರ್ಮಿಕ ಕ್ಷೇತ್ರದಲ್ಲಿ ಡಾ. ಚನ್ನಬಸವ ಪಟ್ಟದ್ದೇವರು. ಅದರಂತೆ ಸಾಹಿತ್ಯ ಕ್ಷೇತ್ರದಲ್ಲಿ ಡಾ. ಜಿ.ಬಿ. ವಿಸಾಜಿ ಅವರು ನೆನಪಾಗುತ್ತಾರೆ. ವಿಸಾಜಿ ಅವರು ಭಾಲ್ಕಿಯಲ್ಲಿ ಕಾಲಿರಿಸಿದಾಗ ಕನ್ನಡವು ಮುಳ್ಳು-ಕಲ್ಲಿನ ಮಾರ್ಗವಾಗಿತ್ತು. ಅದನ್ನು ಕನ್ನಡದ ಮಹಾಮಾರ್ಗವಾಗಿ ಮಾಡಿದ ಶ್ರೇಯಸ್ಸು ಡಾ. ಜಿ.ಬಿ. ವಿಸಾಜಿ ಹಾಗೂ ಅವರ ಸಹಸ್ರ ಸಹಸ್ರ ಅನುಯಾಯಿಗಳಿಂದ ಕೂಡಿದ ಕನ್ನಡ ವಿದ್ಯಾರ್ಥಿ ತಂಡಕ್ಕೆ ಸಲ್ಲಬೇಕು.

ಬೀದರ ಜಿಲ್ಲೆಯಲ್ಲಿ ಮಹಾವಿದ್ಯಾಲಯಗಳು ಪ್ರಾರಂಭವಾಗಿದ್ದೇ ೬೦ನೇ ದಶಕದಲ್ಲಿ ಈ ಮಹಾವಿದ್ಯಾಲಯಗಳ ಕನ್ನಡ ಪ್ರಾಧ್ಯಾಪಕರಾಗಿ ಆಗಮಿಸಿದ (ಪ್ರಾಚಾರ್ಯ) ರಾದ ಬಿ.ಟಿ. ಸಾಸನೂರ, ಪ್ರೊ. ವಸಂತ ಕುಷ್ಟಗಿ, ಪ್ರೊ. ಎಸ್.ಎಸ್. ಆಲಗುರ, ಬೀದರದಲ್ಲಿ, ಪ್ರೊ. ಮಾಣಿಕರಾವ ಧನಶ್ರೀ ಬಸವಕಲ್ಯಾಣದಲ್ಲಿ ಡಾ. ಜಿ.ಬಿ. ವಿಸಾಜಿಯವರು ಭಾಲ್ಕಿಯಲ್ಲಿ ಕನ್ನಡ ಚಟುವಟಿಕೆಗಳನ್ನು ಹೆಚ್ಚಿಸಲು ಕಾರಣರಾದರು.

ಡಾ. ಜಿ.ಬಿ. ವಿಸಾಜಿ ಅವರು ಬೀದರ ಜಿಲ್ಲೆಯ ಪ್ರಮುಖ ಬರಹಗಾರರಾಗಿದ್ದಾರೆ. ಅವರು ಗ್ರಾಮೀಣ ಪರಿಸರದಲ್ಲಿ ಬೆಳೆದುದರಿಂದ ಭಜನೆಯ ಹಾಡುಗಾರರು, ಗೀಗೀ ಪದಗಳ ಗಾಯಕರು,

ದೊಡ್ಡಾಟಗಳು, ಸಣ್ಣಾಟಗಳು, ಸಾಮಾಜಿಕ ನಾಟಕಗಳು, ಕೋಲಾಟಗಳು, ಬುಲಾಯಿ ಪದಗಳು, ಬೀಸುವ ಕುಟ್ಟುವ ಹಾಡುಗಳು, ಹಂತಿಪದಗಳು, ಡೊಳ್ಳಿನ ಹಾಡುಗಳು ಇತ್ಯಾದಿ ಸಾಂಸ್ಕೃತಿಕ ಚಟುವಟಿಕೆಗಳು ಅವರು ಬರಹಗಾರರಾಗಲು ಪ್ರೇರಣೆ ನೀಡಿವೆ. ವಿದ್ಯಾರ್ಥಿ ದೆಸೆಯಿಂದಲೇ ಬರವಣಿಗೆಗೆ ತೊಡಗಿದ್ದಾರೆ. ಅವರು ಕನ್ನಡ ಸಾಹಿತ್ಯದ ಅನೇಕ ಪ್ರಕಾರಗಳ ಕೈಯಾಡಿಸಿದ್ದಾರೆ. ಹೀಗಾಗಿ ಇವರ ಜೀವನ ಹಾಗು ಸಾಹಿತ್ಯ ಸಾಧನೆ ಕುರಿತು ಅಧ್ಯಯನ ಕೈಗೊಳ್ಳುವ ಅಗತ್ಯವಿದೆ ಎಂದು ಭಾವಿಸಲಾಗಿದೆ.

ಡಾ. ಜಿ.ಬಿ. ವಿಸಾಜಿ ಅವರು ಸಾಹಿತ್ಯ ಕ್ಷೇತ್ರದಲ್ಲಿ ಮೊದಲು ಪಾದರ್ಪಣೆ ಮಾಡಿದ್ದು ಅವರು ಬಿ.ಎ. ಓದುತ್ತಿದ್ದಾಗ ಸರ್ಕಾರಿ ಪದವಿ ಮಹಾವಿದ್ಯಾಲಯದ ವಾರ್ಷಿಕ ಪತ್ರಿಕೆಯಲ್ಲಿ "ಪ್ರಶ್ನೋತ್ತರ" ಎಂಬ ಕವನ ಪ್ರಕಟಣೆಯ ಮೂಲಕ ಅವರು ೧೯೬೬ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಕನ್ನಡ ಸ್ನಾತಕೋತ್ತರ ಅಧ್ಯಯನಕ್ಕೆ ಹೋದಾಗ ಅಲ್ಲಿಯ ವಸ್ತಿನಿಲಯದ ವಾರ್ಷಿಕ ಪತ್ರಿಕೆಯಲ್ಲಿ ಅವರ "ಕಂಬನಿ" ಎಂಬ ಸಣ್ಣಕಥೆ ಪ್ರಕಟವಾಯಿತು. ಅದೇ ಆಗ ಯಾದಗೀರಿ ತಾಲ್ಲೂಕಿನಿಂದ ಶ್ರೀ ಬಿ. ಮಹಾದೇವಪ್ಪನವರು ಪ್ರಕಟಿಸುತ್ತಿದ್ದ ಕನ್ನಡ ವಾರಪತ್ರಿಕೆ "ವಿಶ್ವಕಲ್ಯಾಣ" ಪತ್ರಿಕೆಯಲ್ಲಿ ಇವರ ಅನೇಕ ಕವನ ಲೇಖನಗಳು ಪ್ರಕಟವಾಗತೊಡಗಿದವು. ಎಂ.ಎ. (ಕನ್ನಡ) ಓದುತ್ತಿದ್ದಾಗಲೇ ನೆಲದನುಡಿ–೧, ನೆಲದನುಡಿ–೨ ಗ್ರಂಥಗಳನ್ನು ಸಂಪಾದಿಸಿದ್ದಾರೆ. ೧೯೬೮ರಲ್ಲಿ ಭಾಲ್ಕಿಯ ಚನ್ನಬಸವೇಶ್ವರ ಮಹಾವಿದ್ಯಾಲಯದಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಬಂದಾಗಿನಿಂದ ಇಲ್ಲಿಯವರೆಗೆ ಅವರು ನಿರಂತರ ಕನ್ನಡ ಚಟುವಟಿಕೆಗಳಲ್ಲಿ ಪುಸ್ತಕ ಪ್ರಕಟಣೆಯಲ್ಲಿ, ಪತ್ರಿಕೋದ್ಯಮದಲ್ಲಿ ತೊಡಗಿದ್ದಾರೆ. ಈ ಹಿನ್ನಲೆಯಲ್ಲಿ ಡಾ. ಜಿ.ಬಿ.ವಿಸಾಜಿ ಅವರು ಜೀವನದ ಹಂತ ಹಂತದ ವಿವರಗಳ ಮಾಹಿತಿಗಳನ್ನು ಸಂಗ್ರಹಿಸಿ ದಾಖಲೆ ಪಡಿಸುವ ಸಂಶೋಧನೆ ನಡೆಸುವ ಕಾರ್ಯ ಅಗತ್ಯವಿದೆ ಎನಿಸುತ್ತದೆ. ಈ ದೃಷ್ಟಿಯಿಂದ ಡಾ. ಜಿ.ಬಿ.ವಿಸಾಜಿಯವರ ಮನೆತನದ ಹಿನ್ನಲೆ, ಜನನ, ಬಾಲ್ಯ, ಶಿಕ್ಷಣ, ಉದ್ಯೋಗ, ಸಾಹಿತ್ಯಿಕ ಪ್ರಭಾವ, ಪ್ರೇರಣೆ, ಕೌಟುಂಬಿಕ ಜೀವನದ ವಿವರಗಳು ಅರಿಯುವುದು ಮುಖ್ಯವಾಗಿರುತ್ತದೆ.

ಡಾ. ಜಿ.ಬಿ.ವಿಸಾಜಿ ಅವರ ಸಾಹಿತ್ಯ ಕ್ಷೇತ್ರ ಬಹಳ ವಿಶಾಲವಾದ ವ್ಯಾಪ್ತಿಯನ್ನು ಒಳಗೊಂಡಿದೆ. ಅವರ ಬರಹವನ್ನು ಹತ್ತು ಹಲವು ದೃಷ್ಟಿಕೋನಗಳಿಂದ ಅಧ್ಯಯನಕ್ಕೆ ಒಳಪಡಿಸಿ ವಿಮರ್ಶಾತ್ಮಕವಾಗಿ ವಿಶ್ಲೇಷಿಸಲು ಈ ನಿಬಂಧದಲ್ಲಿ ಪ್ರಯತ್ನಿಸಲಾಗಿದೆ. ಒಬ್ಬ ಬರಹಗಾರನ ಕುರಿತಾಗಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಆ ಸಾಹಿತಿಯ ಬದುಕಿನ ಬಗ್ಗೆ ಅರಿತುಕೊಳ್ಳುವುದು ಮಹತ್ವದ ಸಂಗತಿಯಾಗಿದೆ. ಡಾ. ಜಿ.ಬಿ. ವಿಸಾಜಿ ಅವರು ಬಹು ಜನಪ್ರಿಯ ವ್ಯಕ್ತಿಯಾಗಿದ್ದಾರೆ. ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕಾರ್ಯಮಾಡಿದ್ದಾರೆ. ಪತ್ರಿಕೋದ್ಯಮದಲ್ಲಿ ಸುಧೀರ್ಘವಾದ ಅವರ ಶ್ರಮವಿದೆ. ವಯಸ್ಕರ ಶಿಕ್ಷಣ, ಕನ್ನಡ ಬೋಧನೆ, ಇತ್ಯಾದಿ ರಾಷ್ಟ್ರೀಯ ಕಾರ್ಯಗಳಲ್ಲಿಯು ಅವರು ಶ್ರಮಿಸಿದ್ದಾರೆ. ಅವರ ರೇಡಿಯೋ ಚಿಂತನೆಗಳು ಅತ್ಯಂತ ಜನಪ್ರಿಯವಾಗಿವೆ. ವಚನ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ್ದರಿಂದ ಅವರು ಅನೇಕ ಮಠ ಮಾನ್ಯಗಳಲ್ಲಿಯು ಉಪನ್ಯಾಸ ನೀಡಿದ್ದಾರೆ. ಅವರಿಗೆ ನಾಟಕ, ಸಂಗೀತ, ಚಿತ್ರಕಲೆ,

ಚಲನಚಿತ್ರ, ಇತ್ಯಾದಿಗಳಲ್ಲಿ ಅಭಿರುಚಿ, ಆಸಕ್ತಿ ಅವರ ಜೀವನ ಬಹುಮುಖಿಯಾಗಿದೆ. ವಿದ್ಯಾರ್ಥಿಗಳೊಂದಿಗೆ ನಿಕಟ ಸಂಪರ್ಕ ಹೊಂದಿದವರಾಗಿದ್ದಾರೆ. ವಿದ್ಯಾರ್ಥಿಗಳ ಬೆಳವಣಿಗೆಯನ್ನು ಕಂಡು ಹಿರಿಹಿರಿ ಹಿಗ್ಗುತ್ತಾರೆ. ಪ್ರಧಾನವಾಗಿ ಬೀದರ ಜಿಲ್ಲೆಯಲ್ಲಿ ಕನ್ನಡದ ವಾತಾವರಣ ಹೆಚ್ಚಿಸಬೇಕು. ಬರಹಗಾರರನ್ನು ಬೆಳೆಯಿಸಬೇಕು. ಸಾಹಿತ್ಯ ಕ್ಷೇತ್ರದಲ್ಲಿ ಬೀದರ ಜಿಲ್ಲೆಯ ಕೀರ್ತಿಯನ್ನು ರಾಜ್ಯ ಮಟ್ಟದವರೆಗೂ ಬೆಳಗಿಸಬೇಕೆಂಬುದು ಅವರ ಮಹತ್ವಾಕಾಂಕ್ಷೆಯ ಹಂಬಲವಾಗಿದೆ. ಆ ಉದ್ದೇಶದ ಸತ್ಫಲಗಳನ್ನು ಅವರ ವಿದ್ಯಾರ್ಥಿಗಳ ಬೆಳವಣಿಗೆಯಲ್ಲಿ ಕಂಡು ಸಂತೋಷ ಪಟ್ಟಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ತರುಣರಾಗಿದ್ದಾಗಲೆ ಅವರ ಜನ್ಮ ಸ್ಥಳವಾದ ಕೋಹಿನೂರಿನಲ್ಲಿ "ಗೆಳೆಯರ ಬಳಗ" ಸ್ಥಾಪಿಸಿ ಅನೇಕ ಚಟುವಟಿಕೆಗಳನ್ನು ಮಾಡಿದ್ದಾರೆ. ಅವರ ಪ್ರಭಾವ ಆ ಊರಿನಲ್ಲಿ ಇಂದಿಗೂ ಮರೆಯಲಾಗಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಅಜೀವ ಸದಸ್ಯರಾಗಿದ್ದು ಜಿಲ್ಲಾ ಘಟಕಗಳು ಸ್ಥಾಪನೆಯಾದಾಗಿನಿಂದಲು ಅವರು ನಿರಂತರ ಕ್ರಿಯಾಶೀಲರಾಗಿದ್ದಾರೆ. ಜಿಲ್ಲಾ ಮಟ್ಟದ ಮಕ್ಕಳ ಸಾಹಿತ್ಯ ವೇದಿಕೆಯ ಅಧ್ಯಕ್ಷರಾಗಿದ್ದು ಬೀದರ ಜಿಲ್ಲೆಯ ಅನೇಕ ಮಕ್ಕಳನ್ನು ಆದಿಚುಂಚನಗಿರಿಯ ರಾಜ್ಯ ಮಟ್ಟದ ಮಕ್ಕಳ ಸಮ್ಮೇಳನಕ್ಕೆ ಕರೆದುಕೊಂಡು ಹೋಗಿದ್ದಾರೆ. ಧರಿನಾಡು ಕನ್ನಡ ಸಂಘ, ಡಾ. ಚನ್ನಬಸವ ಪಟ್ಟದ್ದೇವರ ಕನ್ನಡ ಸಂಘ, ಪತ್ರಕರ್ತರ ಸಂಘ ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ ಮುಂತಾದ ಚಟುವಟಿಕೆಗಳ ನೇತೃತ್ವ ವಹಿಸಿ ಕಾರ್ಯ ಮಾಡಿದ್ದಾರೆ. ತಾಲ್ಲೂಕು ಜಿಲ್ಲಾ ವಿಭಾಗ ರಾಜ್ಯ ಹಾಗೂ ಹೊರ ರಾಜ್ಯಗಳಲ್ಲಿ ಅನೇಕ ಸಭೆ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ. ಇಂತಹ ಅಪೂರ್ವ ಕಾರ್ಯಗಳನ್ನು ನೆರವೇರಿಸಿದ ಡಾ. ಜಿ.ಬಿ. ವಿಸಾಜಿ ಚರಿತ್ರೆಯನ್ನು ಈ ನಿಬಂಧದಲ್ಲಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಡಾ. ಜಿ.ಬಿ. ವಿಸಾಜಿ ಅವರು ಕಥೆ, ಕವನ ಪ್ರಬಂಧ, ಸಂಶೋಧನೆ, ವಿಮರ್ಶೆ, ವ್ಯಕ್ತಿಚಿತ್ರ, ಪತ್ರಿಕೋದ್ಯಮ, ಸಂಪಾದನೆ, ರೇಡಿಯೋ, ಚಿಂತನೆಗಳು ಇತ್ಯಾದಿ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ವದ ಸಾಧನೆಯನ್ನು ಗೈದಿದ್ದಾರೆ. ಅವರಿಗೆ ಅನೇಕ ಗೌರವಗಳು ದೊರಕಿವೆ ಈ ಮುಂತಾದ ವಿಷಯಗಳನ್ನು ಗುರುತಿಸುತ್ತಾ ಅವರ ಬರವಣಿಗೆಯ ಮೇಲೆ ಬೆಳಕು ಚೆಲ್ಲಬೇಕಾಗಿದೆ.

ಅವರು ತಮ್ಮ ಚಟುವಟಿಕೆಗಳ ಮೂಲಕ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ರಾಜ್ಯಗಳಲ್ಲಿ ಸುತ್ತಾಡಿದ್ದಾರೆ. ಅವರು ನಮ್ಮ ಕನ್ನಡ ಸಾಹಿತ್ಯದ ಅನೇಕ ದಿಗ್ಗಜರನ್ನು ಕಣ್ಣಾರೆ ಕಂಡಿದ್ದಾರೆ. ಅವರ ಭಾಷಣಗಳನ್ನು ಕಿವಿಯಾರೆ ಕೇಳಿದ್ದಾರೆ. ಅವರಲ್ಲಿ ಡಿ.ವಿ.ಜಿ. ಮಾಸ್ತಿವೆಂಕಟೇಶ ಅಯ್ಯಂಗಾರ ಕುವೆಂಪು, ಬೇಂದ್ರೆ, ಮತೀನ, ಅನಕೃ, ತರಾಸು, ಬಸವರಾಜ ಕಟ್ಟಿಮನಿ, ಆರ್.ಸಿ. ಹಿರೇಮಠ, ಸಂ.ಶಿ. ಭೂಸನೂರ ಮಠ, ಈಶ್ವರ ಸಣಕಲ್, ಚೆನ್ನವೀರ ಕಣವಿ ಗೋಪಲಕೃಷ್ಣ ಅಡಿಗ, ನಿರಂಜನ, ಯು.ಆರ್. ಅನಂತಮೂರ್ತಿ, ಶಿವರಾಮ ಕಾರಂತ, ಬೀಚೀ, ಪಿ.ಲಂಕೇಶ, ಪೂರ್ಣಚಂದ್ರ ತೇಜಸ್ವಿ, ಕೆ.ವಿ. ಸುಬ್ಬಣ್ಣ, ಗಿರೀಶ ಕಾರ್ನಾಡ, ವಿ.ಕೃ ಗೋಕಾಕ್, ಚಂದ್ರಶೇಖರ ಕಂಬಾರ, ಗಿರಡ್ಡಿ

ಗೋವಿಂದರಾಜ, ಡಿ.ಎಸ್.ಕರ್ಕಿ, ರಾಯ ಧಾರವಾಡಕರ್, ಬೇಟಗೇರಿ ಕೃಷ್ಣ ಶರ್ಮ, ಸಿದ್ದಯ್ಯಪುರಾಣಿಕ, ಶಾಂತರಸ, ಚಂದ್ರಕಾಂತ ಕುಸನೂರ ಮುಂತಾದ ರಾಶಿ ರಾಶಿ ಕನ್ನಡ ಲೇಖಕರನ್ನು ಸಮೀಪದಿಂದ ನೋಡಿದ್ದಾರೆ. ಕನ್ನಡದ ಕಳಕಳಿಯುಳ್ಳ ಕನ್ನಡ ಬೆಳೆಸುವ ಮಹತ್ವಾಕಾಂಕ್ಷಿಯುಳ್ಳ ನಿರಂತರ ಅಧ್ಯಾಪನ ಮತ್ತು ಬರವಣಿಗೆಯಲ್ಲಿ ತೊಡಗಿರುವ ಡಾ. ಜಿ.ಬಿ. ವಿಸಾಜಿ ಅವರ ಜೀವನ ಮತ್ತು ಸಾಧನೆಯನ್ನು ಬಾಲ್ಯದಿಂದ ಇಲ್ಲಿಯವರೆಗೆ ಪ್ರಸ್ತುತ ನಿಬಂಧದಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

# ಅಧ್ಯಾಯ – ೨

## ಡಾ. ಜಿ.ಬಿ. ವಿಸಾಜಿ ಅವರ ಜೀವನ ಮತ್ತು ಸಾಧನೆ

- ಮನೆತನ
- ಬಾಲ್ಯ ಮತ್ತು ಶಿಕ್ಷಣ
- ವೃತ್ತಿ ಜೀವನ
- ಕೌಟುಂಬಿಕ ಜೀವನ
- ಪ್ರಶಸ್ತಿ ಮತ್ತು ಗೌರವ
- ವ್ಯಕ್ತಿತ್ವ

## ಅಧ್ಯಾಯ – ೨

## ಡಾ. ಜಿ.ಬಿ. ವಿಸಾಜಿ ಅವರ ಜೀವನ ಮತ್ತು ಸಾಧನೆ

ಮನುಷ್ಯ ಪರಿಸರದ ಕೂಸು ಎಂಬ ಮಾತಿಗೆ ಡಾ. ಜಿ.ಬಿ. ವಿಸಾಜಿಯವರ ಜೀವನ ಒಂದು ನಿದರ್ಶನವಾಗಿದೆ. ಒಬ್ಬ ಬರಹಗಾರನ ಹಿನ್ನಲೆಯನ್ನು ತಿಳಿದುಕೊಳ್ಳಬೇಕಾದರೆ ಆತನು ಹುಟ್ಟಿದ ಊರು, ತಾಯಿ, ತಂದೆ, ಸುತ್ತಲಿನ ಪರಿಸರ ಸಂಘಗಳ–ಮಿತ್ರರ ಸಂಬಂಧ ಮುಂತಾದವುಗಳ ಬಗ್ಗೆ ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಒಬ್ಬ ಸೃಜನಶೀಲ ಲೇಖಕನಾಗಿ ಹೊರಹೊಮ್ಮಲು ಎಲ್ಲ ವಿಷಯಗಳು ಮಹತ್ವ ಪಡೆಯುತ್ತದೆ. ಅವರ ಮೇಲೆ ಪ್ರಭಾವ ಪಡೆದ ಪ್ರೋತ್ಸಾಹ ಮುಂತಾದವು ಮುಖ್ಯವಾದವುಗಳು. ಡಾ. ಜಿ.ಬಿ. ವಿಸಾಜಿ ಅವರು ಗ್ರಾಮೀಣ ಪರಿಸರದಲ್ಲಿ ಬೆಳೆದವರಾಗಿದ್ದಾರೆ. ಹಳ್ಳಿಗಳಲ್ಲಿಯ ಜಾತ್ರೆಗಳು, ಖಾಂಡುಗಳು, ಹಬ್ಬಗಳು, ಹೊಲದಲ್ಲಿಯ ಸುಗ್ಗಿ ಕಾರ್ಯಗಳು, ನಾಟಕ, ಭಜನೆಗಳು, ಮದುವೆ ಮುಂತಾದ ಸಮಾರಂಭಗಳು, ಮಕ್ಕಳ ಹಳ್ಳಿಯ ಆಟಗಳು, ಗುಡ್ಡ, ಬೆಟ್ಟ, ನದಿ, ತೋಟಗಳು, ಕಂಬಾರ, ಕುಂಬಾರ ಅಗಸ, ಕ್ಷೌರಿಕ, ಗೊಂದಲಿಗ, ಜಂಗಮರು, ತಳವಾರ, ಸುಡಗಾಡ ಸಿದ್ದರು, ಡೊಂಬರಾಟದವರು, ಕಟಬರ ಆಟದವರು, ಜ್ಯೋತಿಷಿಗಳು, ಪಕ್ಷಿಗಳು, ನಾಯಿ, ಆಕಳು, ಎಮ್ಮೆ, ಎತ್ತು, ಕುರಿಗಳು, ಹಳ್ಳಿಯ ದೇವಾಲಯಗಳು, ಹೀಗೆ ಸುತ್ತಲಿನ ನಾನಾ ಪ್ರಕಾರದ ವೈವಿದ್ಯಮಯ ಪ್ರಭಾವ ಡಾ. ಜಿ.ಬಿ. ವಿಸಾಜಿ ಅವರ ಮೇಲೆ ಆಗಿದೆ.

**ಮನೆತನ :**

ಡಾ. ಜಿ.ಬಿ. ವಿಸಾಜಿ ಅವರು ಗುಲಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ದೇಗಾಂವ ಗ್ರಾಮದಲ್ಲಿ ಅವರ ತಾಯಿಯ ತವರು ಮನೆಯಲ್ಲಿ ಜನಿಸಿದ್ದಾರೆ. ಅವರ ತಾಯಿಯ ಅಣ್ಣ ಹಣಮಂತರಾವ ಲಾಡವಂತಿ ಆ ಊರಿನ ಸಾಹುಕಾರರಾಗಿದ್ದರು. ದೇಗಾಂವ ಗ್ರಾಮದಲ್ಲಿ ಜಿ.ಬಿ. ವಿಸಾಜಿ ಅವರಿಗೆ ಕೆರಿಯಲ್ಲ ಬಳಗ ಊರೆಲ್ಲ ನೆಂಟರು ಅವರ ಅಜ್ಜಿ ಅಂಬಾಬಾಯಿ ಅವರ ತವರ ಮನೆ ದೇಗಾಂವ ಗ್ರಾಮದ ಪ್ರಸಿದ್ಧ ಮಾಲಿ ಪಾಟೀಲರ ಮನೆಯಾಗಿತ್ತು. ಅವರ ಸೋದರತ್ತೆ ಚನ್ನಬಾಯಿ ಅವರ ಪತಿಯ ಮನೆ ದೇಗಾಂವದಲ್ಲಿಯೇ ಇದೆ. ಅವರ ಪತಿ ಶ್ರೇಷ್ಠ ಕುಸ್ತಿ ಪಟುಗಳಾಗಿದ್ದರು. ಅವರ ಮನೆಯ ಮಗ್ಗುಲದಲ್ಲಿಯೆ ಅಂಬರಾಯ ಕೊಳಡಂಗರಗಿ ನಿರಕ್ಷರಿಯಾಗಿದ್ದು ಶ್ರೇಷ್ಠ ಗೀಗೀ ಪದಗಳನ್ನು ರಚನೆಮಾಡಿ ಹಾಡುವಂತವರಾಗಿದ್ದರು. ಅವರ ಮನೆಯ ಮಗ್ಗುಲದಲ್ಲಿಯೆ ಹಜರತ ಸಾಹೇಬ ಗೀಗೀ ಹಾಡುಗಳ ಗಾಯಕ, ಗ್ರಾಮದಲ್ಲೆಲ್ಲ ಕುಸ್ತಿಪಟುಗಳು, ಕಲಾವಿದರು, ಸಾಕಷ್ಟು ಜನರಿದ್ದರು. ವಿಸಾಜಿ ಅವರ ಬಾಲ್ಯ ಜೀವನವನ್ನು ಈ ಗ್ರಾಮದಲ್ಲಿಯೆ ಕಳೆದರು.

ಪ್ರತಿವರ್ಷವು ಜಾತ್ರೆಯಲ್ಲಿ ಒಂದು ನಾಟಕ ಪ್ರದರ್ಶನವಿರುತ್ತದೆ. ಈ ಗ್ರಾಮ ನಾಟಕ, ಭಜನೆಗಳಿಗೂ ಪ್ರಸಿದ್ಧವಾದುದ್ದಾಗಿದೆ. ಅಪ್ಪಾರಾವ ಹಾರ್ಮೋನಿಯಂ ಮಾಸ್ತರರು ನಾಟಕ

ನಿರ್ದೇಶಿಸುತ್ತಿದ್ದರು. ದೇಗಾಂವ ಗ್ರಾಮದ ದೇವರ ಗುಡಿಯ ಎದುರಿಗೆ ನಾಟಕ ರಿರ್ಹಸಲ ತಿಂಗಳುಗಟ್ಟಲೆ ನಡೆಯುತ್ತಿತ್ತು. ಅಲ್ಲಿನ ನಾಟಕವನ್ನು ನೋಡಲು ಗ್ರಾಮದವರೆಲ್ಲರು ಮತ್ತು ಸುತ್ತಲಿನ ಗ್ರಾಮದವರು ಕೂಡ ಆಗಮಿಸುತ್ತಿದ್ದರು. ಅಲ್ಲಿ ಮಹಿಳೆಯರೆಲ್ಲ ನೂರಾರು ಹೊರಸುಗಳನ್ನು ಹಾಕಿ ತಮ್ಮ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತಿದ್ದರು. ಇಡೀ ರಾತ್ರಿಯೆಲ್ಲ ನಾಟಕ ನಡೆಯುತ್ತಿತ್ತು. ನಾಟಕ ನೋಡುತ್ತಾ ನೋಡುತ್ತಾ ಸಾಕಷ್ಟು ಮಕ್ಕಳು ಅಲ್ಲಿಯೇ ಮಲಗುತ್ತಿದ್ದರು. ಮುಂಜಾನೆ ಅವರ ಮನೆಯವರು ಬಂದು ಎತ್ತಿಕೊಂಡು ಹೋಗುತ್ತಿದ್ದರು.

ಜಾತ್ರೆಯಕೊನೆಯ ಹಂತ ಮದ್ದು ಸುಡುವುದು, ಹುಲಿ ಓಡಿಸುವುದು ಈ ಕಾರ್ಯವು ಜಿ.ಬಿ.ವಿಸಾಜಿ ಅವರ ತಾಯಿಯ ಅಣ್ಣನಾದ ಹಣಮಂತಪ್ಪ ಲಾಡವಂತಿ ಅವರು ನೆರವೇರಿಸಿಕೊಡುತ್ತಿದ್ದರು. ಮದ್ದಿನ ಅನೇಕ ಸಾಮಾನುಗಳನ್ನು ತಂದು ಕುಟ್ಟುವುದು, ಬೀಸುವುದು, ಜರಡಿ ಹಿಡಿಯುವುದು, ಕೇರುವುದು ಹತ್ತಾರು ಜನ ಈ ಕಾರ್ಯ ಮನೆಯಲ್ಲಿ ಮಾಡುತ್ತಿದ್ದರು.

ಜಿ.ಬಿ. ವಿಸಾಜಿ ಅವರು ಚಿಕ್ಕವರಿದ್ದಾಗ ಈ ಗ್ರಾಮದಲ್ಲಿಯೇ ಇರುತ್ತಿದ್ದರು. ಹನುಮ ದೇವರ ಗುಡಿಯ ಎದುರುಗಡೆ ಅವರು ಮಣ್ಣಾಟವಾಡಿದ್ದರು. ಅದಲ್ಲದೆ ಅವರು ಗ್ರಾಮದ ಬೀದಿ ಬೀದಿಗಳಲೆಲ್ಲ ಚಡ್ಡಿಯ ಮೇಲೆ ತಿರುಗಾಡಿದ್ದಾರೆ. ಸರಸ್ವತಿ ಮತ್ತು ಲಲಿತಾ ಈ ಇಬ್ಬರು ವಿಸಾಜಿ ಅವರ ಬಾಲ್ಯದ ಉತ್ತಮ ಗೆಳತಿಯರಾಗಿದ್ದರು. ಅಲ್ಲಿಯೇ ಒಂದು ಕುಡಿಯುವ ನೀರಿನ ಬಾವಿಯಿತ್ತು. ಮುಂಜಾನೆಯಿಂದ ಸಂಜೆಯವರೆಗೆ ಗಿಳಿಗಳ ಹಿಂಡಿನಂತೆ ಗ್ರಾಮದ ಗಂಡು ಹೆಣ್ಣು ಮಕ್ಕಳು ನೆರೆಯುತ್ತಿದ್ದರು.

ಶೇಕ ಸಾಹೇಬ ಗುಡಿಯ ದಕ್ಷಿಣ ದಿಕ್ಕಿನಲ್ಲಿ ಮಳೆಗಾಲದಲ್ಲಿ ಹರಿಯುತ್ತಿರುವ ಹಳ್ಳ ಆ ಹಳ್ಳಕ್ಕೆ ಎದುರುಗಡೆ ಗೋಡೆ ಕಟ್ಟಿ ಮೇಲ್ಗಡೆ ನೀರು ನಿಲ್ಲಿಸಿ ಆ ಗುಡಿಯ ಮುಂದಿನಿಂದ ನೀರು ಹರಿಸುತ್ತಾ ಗ್ರಾಮ ಮಧ್ಯದಿಂದಲೇ ತಿಳಿ ನೀರು ಹರಿಯುತ್ತಾ ಹನುಮಂತ ದೇವರ ಗುಡಿಯ ಮುಂದಿನಿಂದ ಕೆಳಗಡೆಯ ಗೋಧಿಯ ಬೆಳಗೆ ನೀರು ಹಾಯಿಸಿ ಸಮೃದ್ಧ ಬೆಳೆ ತೆಗೆಯುತ್ತಿದ್ದರು. ಆ ಊರಿನ ಭೂ ಪ್ರದೇಶವು ಸಹಜವಾಗಿ ಅನುಕೂಲವಾಗಿತ್ತು. ಮೇಲಿನಿಂದ ಕೆಳಗಿನವರೆಗೆ ಈ ನೀರು ಹರಿಯುವುದನ್ನು ನೋಡಿದವರೆಲ್ಲರು ಪುಳುಕಿತರಾಗುತ್ತಿದ್ದರು.

**ಬಾಲ್ಯ ಮತ್ತು ಶಿಕ್ಷಣ :**

೧೯೩೦ರ ದಶಕದಲ್ಲಿ ಕೋಹಿನೂರಿನಲ್ಲಿ ಕಲಿತವರೆಂದರೆ ಶ್ರೀ ಭೀಮರಾವ ವಿಸಾಜಿ ಅವರೆ ಪ್ರಮುಖರು. ಗಣಿತದಲ್ಲಿ ಅವರು ಎತ್ತಿದ ಕೈಯಾಗಿದ್ದರು. ಮೋಡಿ, ಮರಾಠಿ, ಉರ್ದು, ಕನ್ನಡ, ಇಂಗ್ಲೀಷ ಇಷ್ಟು ಭಾಷೆಗಳು ಬರುತ್ತಿದ್ದವು. ಚಿತ್ರಕಲೆಯು ಕೂಡ ಕೈವಶಮಾಡಿಕೊಂಡಿದ್ದರು. ಇದನ್ನೆಲ್ಲ ಅವರು ಗಾಂವಟಿ ಶಾಲೆಯಲ್ಲಿಯೆ ಪ್ರಾಪ್ತಿ ಮಾಡಿಕೊಂಡಿದ್ದರು. ಅವರು ಕೋಹಿನೂರಿನಲ್ಲಿ ಗಾಂವಟಿ ಶಾಲೆ ಪ್ರಾರಂಭಿಸಿದ್ದರಿಂದ ಅವರು ಮಾಸ್ತರ ಎಂದೇ ಕೊನೆಯವರೆಗೂ ಕರೆಯಿಸಿಕೊಂಡಿದ್ದಾರೆ. ಅಂತಹ ಶ್ರೀ ಭೀಮರಾವ ವಿಸಾಜಿ ಅವರ ಜೇಷ್ಠ ಪುತ್ರರಾಗಿ ಗುರುಲಿಂಗಪ್ಪ

ವಿಸಾಜಿ ಜನಿಸಿದ್ದಾರೆ. ಅವರಿಗೆ ಶಿವಶರಣಪ್ಪಾ ಸಾಯಿಬಣ್ಣ, ರವೀಂದ್ರ ಮೂವರು ತಮ್ಮಂದಿರು ಮತ್ತು ಜಗದೇವಿ ಎಂಬ ಸಹೋದರಿ ಇದ್ದಾರೆ. ಅವರ ಅಜ್ಜ ಗುರುಬಸಪ್ಪಾ ವಿಸಾಜಿ ಶ್ರೇಷ್ಠ ಒಕ್ಕಲಿಗರಾಗಿದ್ದರು. ನೂರಾರು ಎತ್ತುಗಳು, ಆಳುಗಳು, ಅವರ ಕುಟುಂಬದಲ್ಲಿದ್ದವು. ಅವರ ಮಗ ಮುರಿಗೆಪ್ಪನವರ ಮದುವೆ ಒಂದು ತಿಂಗಳಕಾಲ ನಡೆಸಲಾಗಿತ್ತು. ಇನ್ನೊಬ್ಬ ಮಗ ಸಾಯಿಬಣ್ಣ ಶ್ರೇಷ್ಠ ನಾಟಕ ಕಲಾವಿದರಾಗಿದ್ದರು. ಮನೆಯಲ್ಲಿ ಒಳ್ಳೆಯ ಕುದುರೆಯಿತ್ತು ಅದರ ಮೇಲೆ ಜಿ.ಬಿ. ವಿಸಾಜಿ ಅವರು ಕುಳಿತು ತಿರುಗಾಡಿದ್ದಾರೆ. ಭೀಮರಾವ ವಿಸಾಜಿ ಅವರು ಉತ್ತಮ ಈಜು ಪಟುವಾಗಿದ್ದರು. ಆದ್ದರಿಂದ ಬಾಲ್ಯದಲ್ಲಿಯೆ ಜಿ.ಬಿ. ವಿಸಾಜಿ ಅವರು ತಂದೆಯಿಂದ ಈಜು ಕಲಿತ್ತಿದ್ದಾರೆ. ಅಜ್ಜಿ ಅಂಬಾಬಾಯಿ ಅವರಿಗೆ ಮೊಮ್ಮಗನ ಮೇಲೆ ತುಂಬ ಪ್ರೀತಿ. ಅವರಿಂದ ಜಿ.ಬಿ. ವಿಸಾಜಿ ಅವರು ಧೈರ್ಯ, ಬದುಕಿನ ಬಗ್ಗೆ ಹೋರಾಟದ ಗುಣಗಳನ್ನು ಅಳವಡಿಸಿಕೊಂಡಿದ್ದಾರೆ. ಕೋಹಿನೂರಿನಲ್ಲಿರುವ ಮನೆಯನ್ನು ಹೊರಗಿನಿಂದ ಬಂದ ಅನೇಕ ಜನರು ನಿಂತು ನೋಡುತ್ತಿದ್ದರು.

ಮನೆಯ ಕಟ್ಟೆ, ಪಾವಟೆಗಳು, ಕಟ್ಟೆಗೆಯ ಕೆತ್ತನೆಯ ಕೆಲಸಗಳು, ಕಂಬಗಳು, ಮೇಲ್ಛಾವಣಿ ಬಾಗಿಲುಗಳು ಅತ್ಯಂತ ಸುಂದರವಾಗಿದ್ದವು.

೧೯೫೫ರ ದಶಕದಲ್ಲಿ ಗ್ರಾಮದಲ್ಲಿ ಸರ್ಕಾರಿ ಶಾಲೆಗಳಿರಲಿಲ್ಲ ಮೊದಲಿಗೆ ಗಾಂವಟಿ ಶಾಲೆಯಲ್ಲಿಯೇ ಜಿ.ಬಿ. ವಿಸಾಜಿ ಅವರು ತಮ್ಮ ಶಿಕ್ಷಣ ಪ್ರಾರಂಭಿಸಿದ್ದಾರೆ. ಕೋಹಿನೂರಿನ ಹತ್ತಿರದ ಗ್ರಾಮವಾದ ವಜ್ರಸಲಗರದಲ್ಲಿ ಒಮ್ಮೆಲೇ ಐದನೇ ಇಯತ್ತೆಗೆ ಸೇರಿಕೊಂಡರು. ಅಲ್ಲಿಂದ ಕ್ರಮಬದ್ಧವಾದ ಶಿಕ್ಷಣ ಪ್ರಾರಂಭವಾಯ್ತು. ಆಗ ಶ್ರೀ ವೀರಣ್ಣಾ ಪಡಸೆಟ್ಟಿ ವಿಜ್ಞಾನ ವಿಷಯ ಬೋಧಿಸುತ್ತಿದ್ದರು. ಈಗ ಜಿ.ಬಿ. ವಿಸಾಜಿ ಅವರ ಸಾಹಿತ್ಯಿಕ ಬೆಳವಣಿಗೆಯನ್ನು ಕಂಡು ಸಂತೋಷ ವ್ಯಕ್ತ ಪಡಿಸಿದ್ದಾರೆ. ಮಾಧ್ಯಮಿಕ ಶಾಲೆಯಲ್ಲಿ ವೀರಣ್ಣ ಅಂಬಲಗೆ ಕನ್ನಡ ಕಲಿಸುತ್ತಿದ್ದರು. ಅವರು ತಮ್ಮ ನಿರ್ದೇಶನದಲ್ಲಿ ತಾವೇ ಹಾರ್ಮೋನಿಯಂ ಮಾಸ್ತರರಾಗಿ ಅಭಿಮನ್ಯು ನಾಟಕ ಆಡಿಸಿದರು. ಇವೆಲ್ಲ ಗುಣಗಳಿಂದ ಜಿ.ಬಿ. ವಿಸಾಜಿ ಅವರ ಮೆಲೆ ವಿದ್ಯಾರ್ಥಿ ದೆಸೆಯಲ್ಲಿಯೆ ಕನ್ನಡದ ಮೆಲೆ ಪ್ರೀತಿ ಉಕ್ಕುವಂತಾಯಿತು.

ಜಿ.ಬಿ. ವಿಸಾಜಿ ಅವರು ಪ್ರೌಢ ಶಾಲೆಯ ಶಿಕ್ಷಣಕ್ಕಾಗಿ ಗುಲಬರ್ಗಾದ ಶ್ರೀ ಶರಣಬಸವೇಶ್ವರ ಬಹೂದ್ದೇಶಿಯ ಶಾಲೆಯಲ್ಲಿ ಸೇರಿದರು. ಅಲ್ಲಿ ಅವರಿಗೆ ಉತ್ತಮ ಶಿಕ್ಷಕರು ಉತ್ತಮ ಸಹಪಾಠಿಗಳು. ಗುಲಬರ್ಗಾದ ಸಾಂಸ್ಕೃತಿಕ, ಸಾಹಿತ್ಯಿಕ ವಾತಾವರಣ ದೊರತು ಅವರ ಸರ್ವಾಂಗೀಣ ಬೆಳವಣಿಗೆಗೆ ಪೂರಕ ವಾತಾವರಣ ದೊರೆಯಿತು. ಪ್ರೊ. ಎಸ್.ಎಸ್. ಬಾಣದ, ಶ್ರೀ ಬಿ.ವ್ಹಿ. ಮಲ್ಲಾಪುರ ಪ್ರಭಾವ ಬೀರಿದ ಶಿಕ್ಷಕರಾಗಿದ್ದಾರೆ. ಅಲ್ಲಿಯೇ ಅವರಿಗೆ ಬರಹಗಾರ ಮಿತ್ರ ಆರ್.ಸಿ. ಕುಲಕರ್ಣಿ ಸ್ನೇಹ ದೊರಕಿತ್ತು. ಆಗ ಅವರ ಸಹಪಾಠಿಗಳಿದ್ದವರೇ ಈಗ ದೊಡ್ಡ ದೊಡ್ಡ ಹುದ್ದೆಗಳಲ್ಲಿದ್ದಾರೆ. ಎಂ. ವಾಯ, ಪಾಟೀಲ, ಬಸವರಾಜ, ಭೀಮಳ್ಳಿ, ಅಂಬರಾವ, ಪಸ್ತಪೂರ, ಗದ್ವಾಲ, ಕಲ್ಯಾಣ ಮುಂತಾದವರು ಪ್ರಸಿದ್ದರಾಗಿದ್ದಾರೆ. ಶ್ರೀ ವ್ಹಿ.ಎಸ್. ಭಂಕೂರ ಚಿತ್ರಕಲಾ ಶಿಕ್ಷಕರ ಕೈಯಲ್ಲಿ ಜಿ.ಬಿ. ವಿಸಾಜಿ ಅವರು ಚಿತ್ರಕಲೆಯಲ್ಲಿ ಎಲೆಮೆಂಟ್ರಿ ಹಾಗೂ ಇಂಟರಮಿಡಿಯೆಟ್ ಪರೀಕ್ಷೆಗಳನ್ನು ಪಾಸು ಮಾಡಿದ್ದಾರೆ. ಆಗ ಚಿತ್ರಕಲಾ ತರಬೆತಿ ನೀಡಲು ಈಗಿನ ಪ್ರಸಿದ್ಧ ಚಿತ್ರಕಲಾವಿದರಾದ ಜೆ.ಎಸ್.

ಖಂಡೇರಾವ ಬರುತ್ತಿದ್ದರು. ವ್ಹಿ.ಜಿ. ಅಂದಾನಿ, ಎ.ಎಸ್. ಪಾಟೀಲ ಮುಂತಾದವರು ಚಿತ್ರಕಲಾ ತರಗತಿಯ ಸಹಪಾಠಿಗಳಾಗಿದ್ದರು.

ಆಗ ಕಲಬುರ್ಗಿಯ ಕನ್ನಡ ಸಾಹಿತ್ಯ ಸಂಘದ ಆವರಣದಲ್ಲಿ ನಾಡ ಹಬ್ಬದ ಚಟುವಟಿಕೆಗಳು ನಡೆಯುತ್ತಿದ್ದವು. ಅಸಬಗಂಜ ಶಾಲೆಯ ಮುಖ್ಯೋಪಾಧ್ಯಾಯರಾದ ಭೀಮಸೇನರಾವ ತಾಳಿಕೋಟೆ ಅವರು ಶಾಲಾ ವಾರ್ಷಿಕ ಪತ್ರಿಕೆ ಹೊರಡಿಸುತ್ತಿದ್ದರು. ಶರಣ ಬಸವೇಶ್ವರ ದೇವಾಲಯದ ಆವರಣದಲ್ಲಿ ಕನ್ನಡದ ಸಭೆ ಸಮ್ಮೇಳನಗಳು ನಡೆಯುತ್ತಿದ್ದವು. ಪಟ್ಟಣದಲ್ಲಿ ಲಿಂಗಾನಂದ ಸ್ವಾಮಿಗಳ ಪ್ರವಚನ, ಮಲ್ಲಿಕಾರ್ಜುನ ಸ್ವಾಮಿಗಳ ಪ್ರವಚನ ನಡೆಯುತ್ತಿದ್ದವು. ಇವೆಲ್ಲವುಗಳ ಪ್ರಭಾವ ಜಿ.ಬಿ. ವಿಸಾಜಿ ಅವರ ಮೇಲಾಗಿದೆ. ನಂತರ ಅವರು ತಮ್ಮ ಕಾಲೇಜು ಶಿಕ್ಷಣವನ್ನು ಸರ್ಕಾರಿ ಪದವಿ ಮಹಾವಿದ್ಯಾಲಯದಲ್ಲಿ ನೆರವೇರಿಸಿದರು. ಅಲ್ಲಿ ಪ್ರೊ. ಶೈಲಜಾ ಉಡಚಣ ಅವರ ನೆಚ್ಚಿನ ಪ್ರಾಧ್ಯಾಪಕರಾಗಿದ್ದರು. ಆಗಿನ ಕಾಲದಲ್ಲಿ ಪ್ರೊ. ಸಿ. ಆನಂದರಾವ ತಮ್ಮ ಸ್ವರಚಿತ ನಾಟಕಗಳನ್ನು ಪ್ರಕಟಿಸಿ ನಾಟಕ ಕಂಪನಿ ಅವರಿಂದ ಪ್ರದರ್ಶಿಸುತ್ತಿದ್ದರು. ಶ್ರೀ ತವಗೆ ಅವರು ಕನ್ನಡ ಬೆಳೆಸುವ ಕಳಕಳಿ ಅವರ ಸಾತ್ವಿಕ ಗುಣ ವಿಸಾಜಿ ಅವರ ಮೆಲೆ ಪ್ರಭಾವ ಬೀರಿದೆ. ಶ್ರೀ ತವಗೆ ಅವರು ವಿಶ್ರಾಂತವಾದ ನಂತರ ನರೋಣದ ಕಾರ್ತಿಕೆಯ ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಅವರೊಡನೆ ಜಿ.ಬಿ. ವಿಸಾಜಿ ಅವರು ಎರಡು ವರ್ಷ ಶಿಕ್ಷಕರಾಗಿ ಅಲ್ಲಿ ಕೆಲಸಮಾಡಿದ್ದಾರೆ. ಮುಂದೆ ಕನ್ನಡ ಎಂ.,ಎ. ಪದವಿಗಾಗಿ ಅಧ್ಯಯನ ಮಾಡಲು ಧಾರವಾಡಕ್ಕೆ ಹೋಗಲು ಅವರು ಒಲವಿನ ಒತ್ತಾಯ ಮಾಡಿದ್ದಾರೆ. ಪ್ರೊ. ಎಸ್.ಎಸ್. ಬಾಣದ ಅವರು ಡಾ. ಆರ್.ಸಿ. ಹಿರೇಮಠ ಅವರಿಗೆ ಮತ್ತು ಪ್ರೊ. ವೃಷಬೇಂದ್ರ ಸ್ವಾಮಿ ಅವರಿಗೆ ಪರಿಚಯ ಪತ್ರಗಳನ್ನಿತ್ತು ನೆರವು ನೀಡಿದ್ದಾರೆ. ಡಾ. ಶೈಲಜಾ ಉಡಚಣ ಅವರು ತಮ್ಮ ಹುಡುಗ ತುಂಬ ಆತ್ಮಿಯತೆಯನ್ನು ತೋರಿದ್ದಾರೆ. ಈ ಕಾಲೇಜಿನಲ್ಲಿಯೇ ಭಾಷಣ ಸ್ಪರ್ಧೆಯಲ್ಲಿ ಅಂತರ ಕಾಲೇಜು ಮಟ್ಟದಲ್ಲಿ ಪ್ರಥಮ ಪ್ರಶಸ್ತಿಯನ್ನು ಪಡೆದು ಆಗ ಕಾಲೇಜಿಗೆ ಅತಿಥಿಗಳಾಗಿ ಬಂದಿದ್ದ ಶ್ರೀ ಬಿ.ಟಿ. ಸಾಸನೂರ ಅವರಿಂದ ಬಹುಮಾನ ಸ್ವೀಕರಿಸಿದ್ದಾರೆ. ಸರ್ಕಾರಿ ಮಹಾವಿದ್ಯಾಲಯದ ವಾರ್ಷಿಕ ಪತ್ರಿಕೆಯಲ್ಲಿ ಪ್ರಪ್ರಥಮವಾಗಿ ಜಿ.ಬಿ. ವಿಸಾಜಿ ಅವರ ಕವನ "ಪ್ರಶ್ನೋತ್ತರ" ಪ್ರಕಟವಾಗಿದೆ.

೧೯೬೬ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಹೋದಾಗ ಉನ್ನತ ಮಟ್ಟದ ಪ್ರಾಧ್ಯಾಪಕರಿಂದ ಅಧ್ಯಯನ, ಪ್ರತಿಭಾವಂತ ಸಹಪಾಠಿಗಳು ಕನ್ನಡ ಸಾಹಿತ್ಯ ಹಾಗೂ ಸಂಗೀತ ಮತ್ತು ಧಾರ್ಮಿಕ ಚಟುವಟಿಕೆಗಳ ಆಗರವಾದ ಮುರುಘ ಮಠ, ಕನ್ನಡ ಸಾಹಿತ್ಯ ಚಟುವಟಿಕೆಗಳ ಆಗರವಾದ ವಿದ್ಯಾವರ್ಧಕ ಸಂಘ ಜಿ.ಬಿ. ವಿಸಾಜಿ ಅವರ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿವೆ. ಸೋಮಶೇಖರ ಇಮ್ರಾಪುರ, ಅನಂತ ಗುರಲಿಂಗ, ಹಾಸ್ಯಗಾರ ಜಿ. ಅಶ್ವತ್ಥ ನಾರಾಯಣ, ಫಾಲಾಕ್ಷಯ್ಯ, ಎಸ್.ಎಸ್. ಕೋತಿನ, ಸರೋಜಿನಿ ಚವಲಾದ, ಶಾಶ್ವತ ಸ್ವಾಮಿ ಮುಕ್ಕುಂದಿಮಠ, ಸಿ.ವ್ಹಿ. ಪ್ರಭು ಸ್ವಾಮಿ ಮಠ ಮುಂತಾದವರು ಜಿ.ಬಿ.ವಿಸಾಜಿ ಅವರ ಅಚ್ಚು ಮೆಚ್ಚಿನ ಸಹಪಾಠಿಗಳಾಗಿದ್ದರು.

ಡಾ. ಆರ್.ಸಿ. ಹಿರೇಮಠ, ಡಾ. ಎಂ.ಎಸ್. ಸುಂಕಾಪೂರ, ವ್ಹಿ.ಜಿ. ಕುಲಕರ್ಣಿ, ವೃಷಬೇಂದ್ರ ಸ್ವಾಮಿ, ವ್ಹಿ.ಎಸ್. ಕುಲಕರ್ಣಿ, ಸಂಶಿ. ಭೂಸನೂರ ಮಠ, ಡಾ. ಎಂ.ಎಂ. ಕಲ್ಬುರ್ಗಿ ಮುಂತಾದ ದಿಗ್ಗಜರು ಕನ್ನಡ ಪಾಠ ಹೇಳಿಕೊಡುತ್ತಿದ್ದರು.

ಸಾಂಸ್ಕೃತಿಕ ಚಟುವಟಿಕೆಗಳು ಜಮಖಾನದ ಮುಖ್ಯಸ್ಥರಾದ ಡಾ. ಶಾಂತಿನಾಥ ದೇಸಾಯಿ, ಡಾ. ಶೆಟ್ಟರ್ ಆಗ ವಿಶ್ವವಿದ್ಯಾಲಯದಲ್ಲಿ ನಾಟಕವಾಡಿಸಿದರು. ಅದರಲ್ಲಿ ಜಿ.ಬಿ. ವಿಸಾಜಿ ಅವರು ಪಾತ್ರಧಾರಿಗಳಾಗಿದ್ದರು. ಧಾರವಾಡ ಆಕಾಶವಾಣಿಯಲ್ಲಿ ಪ್ರಪ್ರಥಮ ಸಲ ವಿಶ್ವವಿದ್ಯಾಲಯದ ವಿದ್ಯಾರ್ಥಿ, ವಿದ್ಯಾರ್ಥಿನಿಯರನ್ನು ಕರೆದುಕೊಂಡು ಹೋಗಿ ಸಮೂಹ ಗಾಯನ ಕಾರ್ಯಕ್ರಮ ಕೊಡಲಾಯಿತು. ಆಗ ಜಿ.ಬಿ. ವಿಸಾಜಿ ಅವರು ಅದರಲ್ಲಿದ್ದರು. ವಿಶ್ವವಿದ್ಯಾಲಯದ ಕುಲಪತಿ ಶ್ರೀ ಡಿ.ಸಿ. ಪಾವಟೆ ಆಗಿನ ರೆಜಿಸ್ಟ್ರರ ಆದ ಎಸ್.ಎಸ್. ವಾಡೀಯಾರ ಅರ್ಥಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ಡಿ.ಎಂ. ನಂಜುಂಡಪ್ಪ ಆಗ ವಿದ್ಯಾರ್ಥಿನಿಯಾಗಿದ್ದ ಮಾತೆ ಮಹಾದೇವಿ ಮುಂತಾದವರ ಪ್ರತ್ಯಕ್ಷ, ಅಪ್ರತ್ಯಕ್ಷ ಪ್ರಭಾವ ಜಿ.ಬಿ. ವಿಸಾಜಿ ಅವರ ಮೇಲೆ ಆಗಿದೆ.

ದ.ರಾ. ಬೇಂದ್ರೆ, ಶಂಭಾ ಜೋಷಿ, ರಾಯ ಧಾರವಾಡಕರ, ಗಿರೀಶ ಕಾರ್ನಾಡ, ಪಾಟೀಲ ಪುಟ್ಟಪ್ಪ ಮುಂತಾದವರ ಉಪನ್ಯಾಸಗಳನ್ನು ಕೇಳಿದ್ದಾರೆ. ಮಲ್ಲಿಕಾರ್ಜುನ ಮನಸೂರ ಬಸವರಾಜ ರಾಜಗುರು ಮುಂತಾದವರ ಸಂಗೀತ ಕೇಳಿದ್ದಾರೆ. ಧಾರವಾಡದ ತಪೋವನದ ತಪಸ್ವಿಗಳಾದ ಕುಮಾರಸ್ವಾಮಿಜಿ ಅವರ ಉಪನ್ಯಾಸ ಕೇಳಿದ್ದಾರೆ. ಧಾರವಾಡದಲ್ಲಿರುವ ದೊಡ್ಡ ದೊಡ್ಡ ಪುಸ್ತಕದ ಅಂಗಡಿಗಳು, ರಸ್ತೆಯ ಮೇಲೆ ರಾಶಿ, ರಾಶಿ, ಸೆಕೆಂಡ ಹ್ಯಾಂಡ, ಪುಸ್ತಕಗಳ ಮಾರಾಟವಾಗುತ್ತಿದ್ದವು. ಚೆನ್ನವೀರ ಕಣವಿ, ಬಸವರಾಜ ಕಟ್ಟಿಮನಿ, ಈಶ್ವರ ಸಣಕಲ್, ವೈ. ನಾಗೇಶಶಾಸ್ತ್ರಿಗಳು, ಎಸ್.ಎಸ್. ಮಾಳವಾಡ, ಗಿರಡ್ಡಿ ಗೋವಿಂದರಾಜ, ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಮುದ್ದಣ್ಣ ಹಿಂಗಮೀರೆ ಮುಂತಾದ ಲೇಖಕರನ್ನು ಅವರ ಚಟವಟಿಕೆಗಳನ್ನು ಧಾರವಾಡದಲ್ಲಿ ಇದ್ದಾಗ ಜಿ.ಬಿ. ವಿಸಾಜಿ ಸಮೀಪದಿಂದ ಗಮನಿಸಿದ್ದಾರೆ. ಇವೆಲ್ಲವು ಅವರ ಸಾಹಿತ್ಯಕ್ಕೆ ಪ್ರೇರಣೆಯನ್ನು ಒದಗಿಸಿದವು. ಜಿ.ಬಿ. ವಿಸಾಜಿ ಅವರು ಕರ್ನಾಟಕ ವಿಶ್ವವಿದ್ಯಾಲಯದಿಂದ ಕನ್ನಡ ಎಂ.ಎ. ಪದವಿಯನ್ನು ದ್ವಿತಿಯ ಶ್ರೇಣಿಯಲ್ಲಿ ಪಡೆದ ಬೀದರ ಜಿಲ್ಲೆಯ ವ್ಯಕ್ತಿಗಳಲ್ಲಿ ಪ್ರಪ್ರಥಮರಾಗಿದ್ದಾರೆ.

**ವೃತ್ತಿ ಜೀವನ :**

ಜಿ.ಬಿ. ವಿಸಾಜಿ ಅವರ ಮನೆಯಲ್ಲಿ ಕಿರಾಣಿ ಅಂಗಡಿಯಿತ್ತು. ಅವರು ಬಾಲ್ಯದಲ್ಲಿಯೇ ಕಿರಾಣಿ ಅಂಗಡಿಯಲ್ಲಿಯೆ ಕುಳಿತು ವ್ಯವಹಾರ ಮಾಡುತ್ತಿದ್ದರು. ಅವರ ಮನೆತನ ಕೃಷಿಕ ಮನೆತನವಾಗಿದ್ದರಿಂದ ಬಾಲ್ಯದಿಂದಲೇ ಮೆಣಸಿನ ಅಗಿಗಳನ್ನು ನೆಡುವುದು, ಕಲ್ಲು ಆಯುವುದು, ಸದೆ ಹೊಡೆಯುವುದು, ಬೆಳೆ ಕೊಯ್ಯುವುದು, ಗೊಬ್ಬರ ಬಂಡಿ ಹೊಡೆಯುವುದು ಇತ್ಯಾದಿ ಹೊಲದ ಕಾರ್ಯಗಳನ್ನು ಮಾಡಿದವರಾಗಿದ್ದಾರೆ. ಅವರ ತಂದೆಯವರು ಶಿಕ್ಷಕರಾಗಿದ್ದರಿಂದ ಸಹಜವಾಗಿಯೇ ಅವರಿಗೆ ಶಿಕ್ಷಕ ವೃತ್ತಿ ಅಂಟಿಕೊಂಡಿತ್ತು. ಅವರು ವಿದ್ಯಾರ್ಥಿಯಾಗಿದ್ದಾಗಲೆ ಸರ್ಕಾರಿ ಪ್ರಾಥಮಿಕ ಶಾಲೆಗೆ ಹೋಗಿ ಮಕ್ಕಳಿಗೆ ಪಾಠ ಬೋಧಿಸುತ್ತಿದ್ದರು. ಬಿ.ಎ. ಪದವಿ

ಮುಗಿಸುತ್ತಲೆ ನರೋಣ ಗ್ರಾಮದಲ್ಲಿ ಎರಡು ವರ್ಷ ಶಿಕ್ಷಕರಾಗಿ ಜನಪ್ರಿಯರಾಗಿದ್ದಾರೆ. ಎಂ.ಎ. ಪದವಿಯನ್ನು ಮುಗಿಸಿ ಒಂದು ತಿಂಗಳು ಸ್ವಂತ ಗ್ರಾಮದ ಪ್ರೌಢ ಶಾಲೆಯಲ್ಲಿ ಒಂದು ತಿಂಗಳು ವಜ್ರಸಲಗರದ ಪ್ರೌಢ ಶಾಲೆಯಲ್ಲಿ ಕಾರ್ಯಮಾಡಿ ನೇರವಾಗಿ ಆಮಂತ್ರಣದ ಮೇರೆಗೆ ೧೯೬೮ರಲ್ಲಿ ಭಾಲ್ಕಿಯ ಚನ್ನಬಸವೇಶ್ವರ ಮಹಾವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಕಾರ್ಯ ಮಾಡಲು ಪ್ರಾರಂಭಿಸಿದರು. ಇಲ್ಲಿ ಕನ್ನಡ ಶಿಕ್ಷಣ ಪ್ರಸಾರಕ್ಕೆ ತೊಡಗಿದ ಪೂಜ್ಯ ಚನ್ನಬಸವ ಪಟ್ಟದ್ದೇವರ ಕೃಪೆಗೆ ಈ ಭಾಗವನ್ನು ಕರ್ನಾಟಕದಲ್ಲಿ ಉಳಿಸಲು ಹೋರಾಡಿದ ಧುರೀಣ ಭೀಮಣ್ಣ ಖಂಡ್ರೆ ಅವರ ಪ್ರೀತಿಗೂ ಇಡೀ ಜೀವನವನ್ನು ಸಮಾಜದ ಬಾಂಧವರ ಸೇವೆಗಾಗಿ ಸಲ್ಲಿಸಿದ ರಾಯಕಾಶಿರಾಯ ದೇಶಮುಖರ ಮೆಚ್ಚಿಗೆಗೂ ಪಾತ್ರರಾಗಿ ಕನ್ನಡ ಚಟುವಟಿಕೆಗಳನ್ನು ಚುರುಕುಗೊಳಿಸಿದರು. ಕನ್ನಡ ಭಾಷಣ ಗಾಯನ ನಾಟಕಗಳ ಪ್ರದರ್ಶನ, ಭಾಷಣಗಳ ಸ್ಪರ್ದೆ, ನಿಬಂಧ ಸ್ಪರ್ದೆ, ಕಂಠಪಾಠ ಸ್ಪರ್ಧೆ, ರಸಪ್ರಶ್ನೆ ಸ್ಪರ್ಧೆ, ಇತ್ಯಾದಿ ಚಟುವಟಿಕೆಗಳು ಭರದಿಂದ ನಡೆಸಲಾಯಿತು. ಕವಿ ಸಮ್ಮೇಳನಗಳು, ವಿಚಾರ ಸಂಕೀರ್ಣಗಳು ಇತ್ಯಾದಿ ಸಮ್ಮೇಳನಗಳು ನಿರಂತರವಾಗಿ ನಡೆಸಿದ್ದಾರೆ. ಪತ್ರಿಕೋದ್ಯಮದಲ್ಲಿ ತೊಡಗಿ ತಾವು ಬರೆಯುವದಲ್ಲದೆ ಅನೇಕರನ್ನು ಪತ್ರಿಕೋದ್ಯಮದಲ್ಲಿ ತೊಡಗಿಸಿದ್ದಾರೆ. "ಪ್ರಜಾವಾಣಿ"ಯಲ್ಲಿ ೧೫ ವರ್ಷಕ್ಕಿಂತ ಹೆಚ್ಚು ಭಾಲ್ಕಿ ತಾಲ್ಲೂಕಿನ ವರದಿಗಾರರಾಗಿ ಕಾರ್ಯ ಮಾಡಿದ್ದಾರೆ. "ಶಾಂತಿಕಿರಣ" ಪತ್ರಿಕೆಯ ಸಂಪಾದಕರಾಗಿದ್ದಾರೆ. "ರಾಜೋಳೆ ಸಂಘರ್ಷ" ಪತ್ರಿಕೆಯ ಗೌರವ ಸಂಪಾದಕರಾಗಿ ಕಾರ್ಯ ಮಾಡಿದ್ದಾರೆ. ಪತ್ರಿಕೋದ್ಯಮದ ವಿಭಾಗ ಮಟ್ಟದ ರಾಜ್ಯ ಮಟ್ಟದ, ಅನೇಕ ತರಬೇತಿ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ದೆಹಲಿಯಿಂದ ಹಿಂದಿ ಮಾಧ್ಯಮದಲ್ಲಿ ಪತ್ರಿಕೋದ್ಯಮ ಕುರಿತು ಶಿಕ್ಷಣವನ್ನು ಪೂರೈಸಿದ್ದಾರೆ.

ಅವರ ಪತ್ರಿಕೋದ್ಯಮ ಪ್ರೇರಣೆಯಿಂದ ಅವರ ವಿದ್ಯಾರ್ಥಿಗಳಾದ ಎಚ್. ಸಿ. ಖಡ್ಕೆ, ಗುರುನಾಥ ಗಡ್ಡೆ, ಧನರಾಜ ಘುಲಾರೆ, ಚಂದ್ರಕಾಂತ ಬಿರಾದಾರ, ಸೋಮನಾಥ ಮುದ್ದಾ, ಚಂದ್ರಶೇಖರ, ಎಂ.ಎ. ಅಂಕುಶ ಢೋಲೆ, ಮಲ್ಲಿಕಾರ್ಜುನ ಸ್ವಾಮಿ, ಓಂಪ್ರಕಾಶ ರೊಟ್ಟೆ, ವಿಜಯಕುಮಾರ ಪರಮಾ, ಆನಂದದೇವಪ್ಪ ಸುನೀಲ ಹೊಸ್ನಾಳೆ ಮುಂತಾದವರು ಪತ್ರಿಕಾ ಕ್ಷೇತ್ರದಲ್ಲಿ ಕಾರ್ಯಮಾಡುತ್ತಿದ್ದಾರೆ.

ಚನ್ನಬಸವೇಶ್ವರ ಮಹಾವಿದ್ಯಾಲಯದಲ್ಲಿ ಪ್ರಪ್ರಥಮ ಕನ್ನಡ ಐಚ್ಛಿಕ ವಿಷಯವನ್ನು ತೆಗೆದುಕೊಂಡ ರಾಮಚಂದ್ರ ಬಾವಿದೊಡ್ಡಿ ಅವರಿಗೆ ಪ್ರೋತ್ಸಾಹ ಜನಕವಾಗಿ ತಾವು ಹಾಗೂ ತಮ್ಮ ಸಹ ಅಧ್ಯಾಪಕ ಬೈರುಡಗಿ ಕೊಡಿ ಒಂದು ತೊಲೆ ಬಂಗಾರವನ್ನು ಕೊಟ್ಟಿದ್ದಾರೆ. ಅವರ ವಿದ್ಯಾರ್ಥಿಗಳಾದಂತಹ ಎಸ್.ಆರ್. ದೇವಪ್ಪ ವಿಶ್ವವಿದ್ಯಾಲಯದ ಮಟ್ಟದಲ್ಲಿ ಚಿನ್ನದ ಪದಕ ಪಡೆದಿದ್ದಾರೆ. ಜಗನ್ನಾಥ ಮೀಸೆ ವಿಶ್ವವಿದ್ಯಾಲಯದಲ್ಲಿ ಚಿನ್ನದ ಪದಕ ಪಡೆದಿದ್ದಾರೆ. ಕುಮಾರಿ ಸುನೀತಾ ದಾಡಗಿ ಬಿ.ಎ. ಪದವಿಯಲ್ಲಿ ಚಿನ್ನದ ಪದಕ ಪಡೆದಿದ್ದಾಳೆ. ಅವರ ಪುತ್ರ ವಿಕ್ರಮ ವಿಸಾಜಿ ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ನಾಲ್ಕು ಚಿನ್ನದ ಪದಕಗಳನ್ನು ಗಳಿಸಿದ್ದಾರೆ. ಅವರ ವಿದ್ಯಾರ್ಥಿ ರಾಮಕೃಷ್ಣ ಸಾಳೆ ಅಂತರ ಕಾಲೇಜ ಮಟ್ಟದ ಭಾಷಣ ಸ್ಪರ್ಧೆಯ ಬೆಳಗಾವಿಯ ಜೆ.ಎನ್.

ಮೆಡಿಕಲ ಕಾಲೇಜಿನಲ್ಲಿ ಏರ್ಪಡಿಸಿದ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದಿದ್ದಾನೆ. ಜಿ.ಬಿ. ವಿಸಾಜಿ ಅವರಿಗೆ ವಿದ್ಯಾರ್ಥಿಗಳ ಮೇಲೆ ಬಹಳ ಪ್ರೀತಿ ಈಗಲು ಅವರು ಜನ್ಮೋತ್ಸವದಂದು ಕನ್ನಡದಲ್ಲಿ ತರಗತಿಗೆ ಪ್ರಥಮ ಬಂದ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಶಾಲು ಹೊದಿಸಿ ನಗದು ಬಹುಮಾನ ನೀಡುತ್ತಾರೆ. ಅವರ ವಿದ್ಯಾರ್ಥಿಗಳು ವಿವಿಧ ಕ್ಷೇತ್ರಗಳಲ್ಲಿ ವಿವಿಧ ಹುದ್ದೆಗಳಲ್ಲಿ ಕಾರ್ಯ ಮಾಡುತ್ತಿದ್ದು ಗಮನಾರ್ಹರಾಗಿದ್ದಾರೆ. ಅವರ ವೃತ್ತಿ ಮತ್ತು ಪ್ರವೃತ್ತಿ ಒಂದೇ ಆಗಿರುವುದು ಸೌಭಾಗ್ಯವೆಂದೇ ಹೇಳಬೇಕು.

**ಕೌಟುಂಬಿಕ ಜೀವನ :**

ಶ್ರೀ ಗುರುಬಸಪ್ಪಾ ವಿಸಾಜಿ ಅವರದು ಕೋಹಿನೂರಿನಲ್ಲಿ ಪ್ರಸಿದ್ಧವಾದ ಕೃಷಿಕರ ಮನೆತನವಾಗಿತ್ತು. ಗುರುಬಸಪ್ಪಾ ವಿಸಾಜಿ ತಂದೆ ಹೆಸರುಶಿವಲಿಂಗಪ್ಪಾ ವಿಸಾಜಿ ಎಂದು ತಿಳಿದುಬರುತ್ತದೆ. ಗುರುಬಸಪ್ಪಾ ವಿಸಾಜಿ ಅವರಿಗೆ ಮಹಾದೇವಿ ಎಂಬ ತಂಗಿ ಇದ್ದಳು. ಆಕೆಯನ್ನು ಆಳಂದ ತಾಲ್ಲೂಕಿನ ಚೆಂಚನಸೂರ ಗ್ರಾಮದ ಹತ್ತಿರವಿರುವ ಸಂಗೋಳಗಿಯಲ್ಲಿ ಮದುವೆ ಮಾಡಿಕೊಡಲಾಯಿತು. ಗುರುಬಸಪ್ಪಾ ವಿಸಾಜಿ ಅವರಿಗೆ ಚಂದವ್ವ, ರತ್ನಮ್ಮ, ಅಂಬವ್ವ ಮೂವರು ಹೆಂಡತಿಯರಿದ್ದರು. ಇವರ ಮೂರನೆ ಹೆಂಡತಿ ಅಂಬವ್ವಳ ಮಗನೇ ಭೀಮರಾವ ವಿಸಾಜಿ ಇವರಿಗೆ ಜನಬಾಯಿ ಎಂಬ ತಂಗಿ ಇದ್ದಳು ಭೀಮರಾವ ವಿಸಾಜಿ ಅವರು ಐದು ವರ್ಷದವರಿದ್ದಾಗಲೇ ಮೂರು ವರ್ಷವಾಗಿದ್ದ ಶಿವಗಂಗಾ ಅವರನ್ನು ಮದುವೆಯಾಗಿದ್ದಾರೆ. ಇವರ ಜೇಷ್ಠ ಪುತ್ರನೇ ಗುರಲಿಂಗಪ್ಪಾ (ಜಿ.ಬಿ. ವಿಸಾಜಿ) ಇವರಿಗೆ ಶಿವಶರಣಪ್ಪಾ, ಸಾಯಿಬಣ್ಣ, ರವೀಂದ್ರ ತಮ್ಮಂದಿರು ಮತ್ತು ಜಗದೇವಿ ಎಂಬ ತಂಗಿ ಇದ್ದಾರೆ. ಶಿವಶರಣಪ್ಪಾ ಏಳನೇ ಇಯತ್ತೇವರೆಗೆ ಓದಿ ಕೋಹಿನೂರಿನಲ್ಲಿ ಕೃಷಿ ಕಾಯಕದಲ್ಲಿ ತೊಡಗಿದ್ದಾರೆ. ಸಾಯಿಬಣ್ಣ ಬೀದರ ಜಿಲ್ಲೆಯ ಹಳ್ಳಿಖೇಡ (ಬಿ) ಗ್ರಾಮದಲ್ಲಿ ಅಂಬೇಡ್ಕರ ಪದವಿ ಪೂರ್ವ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕಾರ್ಯ ಮಾಡುತ್ತಿದ್ದಾರೆ. ರವೀಂದ್ರ ವಿಸಾಜಿ ಎಂ.ಎ. ಪದವಿಧರನಾಗಿದ್ದು ಬಸವಕಲ್ಯಾಣ ತಾಲ್ಲೂಕಿನಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದಾರೆ.

ಜಿ.ಬಿ. ವಿಸಾಜಿ ಅವರ ಮದುವೆ ೧೯೭೦ ರಲ್ಲಿ ಪೂಜ್ಯ ಚೆನ್ನಬಸವ ಪಟ್ಟದ್ದೇವರು ಹಿರೇಮಠ ಸಂಸ್ಥಾನ ಭಾಲ್ಕಿ ಅವರು ಭಾಲ್ಕಿಯ ಡೋಣಗಾಪುರೆ ಮನೆತನದ ಕಲಾವತಿಯೊಂದಿಗೆ ನೆರವೇರಿಸಿದರು. ಇವರಿಗೆ ಇಬ್ಬರು ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣು ಮಕ್ಕಳು ಇದ್ದಾರೆ. ಜೆಷ್ಠ ಪುತ್ರ ಚನ್ನಬಸವ ಡಿಪ್ಲೋಮಾ ಮೇಕ್ಯಾನಿಕಲ ಪದವೀಧರನಾಗಿದ್ದು ಭಾಲ್ಕಿಯಲ್ಲಿಯೇ ಒಂದು ಪುಟ್ಟ ಅಂಗಡಿಯನ್ನು ಇಟ್ಟುಕೊಂಡು ವ್ಯಾಪಾರದಲ್ಲಿ ತೊಡಗಿದ್ದಾನೆ. ಇನ್ನೊಬ್ಬ ಮಗ ವಿಕ್ರಮ ವಿಸಾಜಿ ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕನಾಗಿದ್ದು ರಾಜ್ಯ ಮಟ್ಟದ ಕವಿಗಳಲ್ಲಿ ಒಬ್ಬನಾಗಿದ್ದಾನೆ. ಅವರ ಮಕ್ಕಳಾದ ರಸವಂತಿ ಮತ್ತು ಪ್ರಕೃತಿ ತಮ್ಮ ಇಂಜಿನಿಯರ ಗಂಡಂದರೊಂದಿಗೆ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.

ವಿಸಾಜಿ ಅವರ ಎಲ್ಲಾ ಮಕ್ಕಳಿಗು ಒಂದು ಗಂಡು ಒಂದು ಹೆಣ್ಣು ಮಕ್ಕಳು ಜನಿಸಿದ್ದಾರೆ. ಹೀಗಾಗಿ ಡಾ. ಜಿ.ಬಿ. ವಿಸಾಜಿಯವರದ್ದು ತುಂಬಿದ ಕುಟುಂಬವಾಗಿದೆ. ಅವರದು ಸಂತೃಪ್ತ ಜೀವನವಾಗಿದೆ.

**ಹವ್ಯಾಸಗಳು :**

ಓದುವುದು, ಬರೆಯುವುದು, ಪತ್ರಿಕೋದ್ಯಮ, ನಾಟಕ, ಚಿತ್ರಕಲೆ, ಸಂಗೀತ ಮತ್ತು ಚಲನಚಿತ್ರ ಡಾ. ಜಿ.ಬಿ. ವಿಸಾಜಿ ಅವರ ಪ್ರೀತಿಯ ಹವ್ಯಾಸಗಳಾಗಿವೆ. ಅವರು ೧೯೮೩ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕ ನಾಟಕ ಅಕಾಡೆಮಿ ನಡೆಸಿದ ನಾಟಕಾಭಿರುಚಿ ಶಿಬಿರದಲ್ಲಿ ಭಾಗವಹಿಸಿದರು. ಆ ಶಿಬಿರದ ನೇತೃತ್ವವನ್ನು ರಾಮಚಂದ್ರದೇವ ಅವರು ವಹಿಸಿದ್ದರು. ಬಿ.ರತ್ನ, ಚೆನ್ನಯ್ಯ, ಸುಧೀರ, ಡಿ.ಆರ್. ನಾಗರಾಜ, ಅಂಬರೀಷ ಮುಂತಾದವರು ಬಂದು ನಾಟಕಗಳ ಬಗ್ಗೆ ಚರ್ಚಿಸಿದರು. ಶಿಬಿರಾರ್ಥಿಗಳಿಂದ ನಾಟಕಾಭಿನಯವನ್ನು ಮಾಡಿಸಲಾಗುತ್ತಿತ್ತು. ೧೯೮೧ರಲ್ಲಿ ಹೆಗ್ಗೂಡಿನಲ್ಲಿ ಚಲನಚಿತ್ರ ಸಹೃದಯತೆ ಶಿಬಿರದಲ್ಲಿ ಜಿ.ಬಿ. ವಿಸಾಜಿ ಅವರು ಭಾಗವಹಿಸಿದರು. ಈ ಶಿಬಿರದಲ್ಲಿ ಅಗ್ರಹಾರ ಕೃಷ್ಣಮೂರ್ತಿ ಚಂದ್ರಶೇಖರ ತಾಳ್ಯ, ಸತೀಶ ಕುಲಕರ್ಣಿ, ಹೇಮಾ ಪಟ್ಟಣ ಶೆಟ್ಟಿ, ಅನಂತಮೂರ್ತಿ ಅವರ ಮಗಳು ಅನುರಾಧ, ಜಿ.ಎಚ್. ನಾಯಕ ಅವರ ಮಗಳು ಮಮತಾ ಅವರು ಭಾಗವಹಿಸಿದರು. ಸಿನಿಮಾದ (ಚಲನಚಿತ್ರ) ಇತಿಹಾಸ ಜಗತ್ತಿನ ಶ್ರೇಷ್ಠ ಚಲನಚಿತ್ರಗಳು ಸಿನಿಮಾದಲ್ಲಿ ಸಂಗೀತದ ಪ್ರಾಧಾನ್ಯತೆ ಮುಂತಾದ ವಿಷಯಗಳನ್ನು ತಿಳಿಸಲಾಯಿತು. ಪೂನಾ ಫಿಲಂ ಸಂಸ್ಥೆಯಿಂದ ಅನೇಕ ವಿದ್ವಾಂಸರು ಉಪನ್ಯಾಸ ನೀಡಲು ಬಂದಿದ್ದರು. ಗಿರೀಶ ಕಾಸರವಳ್ಳಿ ಉಪನ್ಯಾಸ ನೀಡಿದ್ದರು. ಚಲನಚಿತ್ರಕ್ಕೆ ಸಂಬಂಧಿಸಿದ ಅನೇಕ ಪುಸ್ತಕಗಳು, ನೋಟ್ಸ್‌ಗಳು ಅಲ್ಲಿ ಕೊಡಲಾಯಿತು.

ರಾಷ್ಟ್ರೀಯ ವಯಸ್ಕರ ಶಿಕ್ಷಣ ಕಾರ್ಯದಲ್ಲಿ ಜಿ.ಬಿ. ವಿಸಾಜಿ ಅವರು ತೊಡಗಿದ್ದರು. ೧೯೯೨ರಲ್ಲಿ "ಬೀದರ ದೀಪ" ಪಠ್ಯ ರಚನಾ ಕಾರ್ಯಗಾರದಲ್ಲಿ ಭಾಗವಹಿಸಿದ್ದಾರೆ. ಆಡಳಿತ ಕನ್ನಡ ಕಾರ್ಯ ಶಿಬಿರದಲ್ಲಿ ಭಾಗವಹಿಸಿದ್ದಾರೆ. ಕನ್ನಡೇತರರಿಗೆ ಕನ್ನಡ ಕಲಿಸುವ ಬೋಧಕರ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದಾರೆ. ಮಕ್ಕಳ ಸಾಹಿತ್ಯ ಕಮ್ಮಟದಲ್ಲಿ (೧೯೮೭) ಭಾಗವಹಿಸಿದ್ದಾರೆ. ಹೀಗೆ ಡಾ. ಜಿ.ಬಿ. ವಿಸಾಜಿ ಅವರು ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ನಿರಂತರ ತೊಡಗಿದ್ದಾರೆ.

ಗುಲಬರ್ಗಾದಲ್ಲಿ ಉತ್ತಮ ನಾಟಕಗಳು ಪ್ರದರ್ಶನವಾಗುತ್ತಿದ್ದಾಗ ಭಾಲ್ಕಿಯಿಂದ ನೋಡಲು ಹೋಗುತ್ತಿದ್ದರು. ಅವರು ಕನ್ನಡದ ಅನೇಕ ಸಾಹಿತ್ಯಿಕ ಪತ್ರಿಕೆಗಳನ್ನು ಓದುವಂತವರಾಗಿದ್ದಾರೆ. ಅದರಲ್ಲಿ ರುಜುವಾತ, ಸಾಕ್ಷಿ, ಸಾಧನೆ, ಕರ್ನಾಟಕ ಭಾರತಿ ಪುಸ್ತಕ ಪುರವಣಿ, ಅಂಕಣ, ಶುದ್ರ, ಸಂಕ್ರಮಣ, ಸಂವಾದ, ಸಂಚಯ, ಶಬ್ದಗುಣ ಕನ್ನಡ ಅಧ್ಯಯನ, ಪ್ರಬುದ್ಧ ಕರ್ನಾಟಕ, ಮಾತುಕತೆ, ಈಮಾಸ ನಾಟಕ, ಗಾಂಧಿ ಬಜಾರ ಇತ್ಯಾದಿ ಪತ್ರಿಕೆಗಳನ್ನು ನೋಡುತ್ತಿದ್ದರು. ಅವರಿಗೆ ಈ ಭಾಗದಿಂದ ಒಂದು ಶ್ರೇಷ್ಠ ಸಾಹಿತ್ಯಿಕ ಪತ್ರಿಕೆ ಹೊರಡಿಸಬೇಕೆಂಬ ಮಹತ್ವಾಕಾಂಕ್ಷೆ ಇತ್ತು.

ಭಾಲ್ಕಿಯಲ್ಲಿ ಪ್ರತಿವರ್ಷ ದೇವಿ ನಗರದಲ್ಲಿ ಸಂಗೀತ ದರ್ಬಾರ ನೆರವೇರುತ್ತದೆ. ಶ್ರೇಷ್ಠ ಸಂಗೀತ ಕಲಾವಿದರು ಬಂದು ಭಾಗವಹಿಸುತ್ತಾರೆ. ಇಡೀ ರಾತ್ರಿ ಸಂಗೀತ ಕಾರ್ಯಕ್ರಮ ನಡೆಯುತ್ತದೆ. ಡಾ. ಜಿ.ಬಿ. ವಿಸಾಜಿ ಅವರು ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ.

ಜಿ.ಬಿ. ವಿಸಾಜಿ ಅವರಿಗೆ ಚಿತ್ರಕಲೆಯ ಹವ್ಯಾಸ ಕೂಡ ಇದೆ. ಅನೇಕ ಶ್ರೇಷ್ಠ ಚಿತ್ರಕಲಾವಿದರು ಅವರ ಸ್ನೇಹಿತರಾಗಿದ್ದರು. ವ್ಹಿ.ಜಿ. ಅಂದಾನಿ, ಎ.ಎಸ್. ಪಾಟೀಲ, ಎಂ.ಬಿ. ಲೋಹಾರ, ವ್ಹಿ.ಟಿ. ಕಾಳೆ ಮುಂತಾದವರು ಅವರ ಸ್ನೇಹಿತರಾಗಿದ್ದಾರೆ. ಗುಲಬರ್ಗಾಕ್ಕೆ ಹೋದಾಗ ಆದರ್ಶ ಚಿತ್ರಕಲಾ ಮಹಾವಿದ್ಯಾಲಯಕ್ಕೆ ಭೇಟಿ ನೀಡಿ ಅಲ್ಲಿನ ಚಿತ್ರಕಲೆ ವೀಕ್ಷಿಸುತ್ತಾರೆ. ಬೆಂಗಳೂರಿಗೆ ಹೋದಾಗ ವೆಂಕಟಪ್ಪ ಗ್ಯಾಲರಿ, ಅಶೋಕ ಹೋಟಲ ಚಿತ್ರಕಲಾ ಗ್ಯಾಲರಿ, ಚಿತ್ರಕಲಾ ಪರಿಷತ್ತಿನ ಚಿತ್ರಕಲಾ ಗ್ಯಾಲರಿ ವೀಕ್ಷಿಸುತ್ತಾರೆ. ಮೈಸೂರಿನ ಜಗನ್ಮೋಹನ ಪ್ಯಾಲೇಸನಲ್ಲಿರುವ ಚಿತ್ರಗಳನ್ನು ಹೈದ್ರಾಬಾದಿನ ಸಾಲಾರ ಜಂಗ ಮ್ಯೂಜಿಯಂನಲ್ಲಿರುವ ಚಿತ್ರಗಳನ್ನು ಮುಂಬಯಿಯಲ್ಲಿಯ ಜಹಾಂಗೀರ ಆರ್ಟ ಗ್ಯಾಲರಿಯ ಚಿತ್ರಗಳನ್ನು ಅವರು ತಪ್ಪದೆ ವೀಕ್ಷಿಸುತ್ತಾರೆ. ಒಟ್ಟಿನಲ್ಲಿ ಡಾ. ಜಿ.ಬಿ. ವಿಸಾಜಿ ಅವರಿಗೆ ಸಾಹಿತ್ಯ, ಸಂಗೀತ, ಚಿತ್ರಕಲೆ, ಚಲನಚಿತ್ರ, ನಾಟಕ ನೃತ್ಯ ಪತ್ರಿಕೋದ್ಯಮ ಇತ್ಯಾದಿ ಹವ್ಯಾಸಗಳು ಅವರ ಜೀವನದಲ್ಲಿ ಹಾಸು ಹೊಕ್ಕಾಗಿ ತುಂಬಿವೆ.

**ಪ್ರಶಸ್ತಿ ಗೌರವ :**

ಜಿ.ಬಿ. ವಿಸಾಜಿ ಅವರು ಅನೇಕ ಪ್ರಶಸ್ತಿ ಮತ್ತು ಗೌರವಗಳಿಗೆ ಭಾಜನರಾಗಿದ್ದಾರೆ. ಪ್ರಶಸ್ತಿ ಮತ್ತು ಗೌರವಗಳು ಮನುಷ್ಯನ ಪ್ರತಿಭೆಯನ್ನು ಗುರುತಿಸುವುದಲ್ಲದೆ ವ್ಯಕ್ತಿಯ ಬೆಳವಣಿಗೆಗೆ ಪ್ರೇರಣೆಯನ್ನು ನೀಡುತ್ತವೆ. ಜಿ.ಬಿ. ವಿಸಾಜಿ ಅವರು ಬಿ.ಎ. ವಿದ್ಯಾರ್ಥಿಗಳಾಗಿದ್ದಾಗ ಗುಲಬರ್ಗಾದ ಅಂತರ್ ಕಾಲೇಜು ಮಟ್ಟದ ಭಾಷಣ ಸ್ಪರ್ಧೆ ನಡೆದಿತ್ತು ಸ್ವಾಮಿ ವಿವೇಕಾನಂದರ ಜೀವನ ಮತ್ತು ಸಾಧನೆ ಕುರಿತು ಭಾಷಣ ಏರ್ಪಡಿಸಲಾಗಿತ್ತು. ವಿಸಾಜಿ ಅವರು ಸರ್ಕಾರಿ ಪದವಿ ಮಹಾವಿದ್ಯಾಲಯದಲ್ಲಿ ಪ್ರಥಮ ಸ್ಥಾನ ಪಡೆದು ಶರಣಬಸವೇಶ್ವರ ಮಹಾವಿದ್ಯಾಲಯದಲ್ಲಿ ಏರ್ಪಡಿಸಿದ ಅಂತರ ಕಾಲೇಜು ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದು ಬಹುಮಾನವನ್ನು ಆಗಿನ ಅತಿಥಿಗಳಾಗಿದ್ದ ಪ್ರಾಚಾರ್ಯ ಬಿ.ಟಿ. ಸಾಸನೂರ ಅವರಿಂದಲೇ ಪಡೆದಿದ್ದಾರೆ. ಆಗ ಎರಡನೇ ಬಹುಮಾನ ಅಪ್ಪರಾವ ಅಕ್ಕೋಣಿ, ಮೂರನೇ ಬಹುಮಾನ ಕಲ್ಯಾಣರಾವ ಬಕ್ಸಿ ಅವರಿಗೆ ದೊರಕಿತು.

೧೯೬೮ರಲ್ಲಿ ಚನ್ನಬಸವೇಶ್ವರ ಮಹಾವಿದ್ಯಾಲಯದಲ್ಲಿ ಚಿತ್ರಕಲಾ ಸ್ಪರ್ದೆಯನ್ನು ಏರ್ಪಡಿಸಲಾಗಿತ್ತು. ಇವರು ಚಿತ್ರಿಸಿದ ಅಕ್ಕಮಹಾದೇವಿ ಭಾವಚಿತ್ರಕ್ಕೆ ಆಗಿನ ತೀರ್ಪುಗಾರರಾದ ಖ್ಯಾತ ಕಾದಂಬರಿಕರರಾದ ಶ್ರೀ ಬಸವರಾಜ ಕಟ್ಟಿಮನಿ ಅವರು ಪ್ರಥಮ ಬಹುಮಾನ ನೀಡಿ ಗೌರವಿಸಿದರು. ಭಾಲ್ಕಿಯಲ್ಲಿ ಡಾ. ದ.ರಾ. ಬೇಂದ್ರೆ ಅವರ ಭಾವಗೀತೆ ಗಾಯನ ಸ್ಪರ್ಧೆ ಏರ್ಪಡಿಸಲಾಗಿತ್ತು. ಪ್ರಾಯೋಜಕರು ಹಾಗು ತೀರ್ಪುಗಾರರಾದ ಡಾ. ಜಿ. ಕೃಷ್ಣಪ್ಪ ಅವರು ಬಹುಮಾನ ನೀಡಿ ಗೌರವಿಸಿದರು.

ಡಾ. ಜಿ.ಬಿ. ವಿಸಾಜಿ ಅವರ ಕನ್ನಡ ಸೇವೆಯನ್ನು ಗಮನಿಸಿ ಬೀದರ ಜಿಲ್ಲಾಧಿಕಾರಿಗಳು ಕರ್ನಾಟಕ ರಾಜ್ಯೋತ್ಸವ (೧೯೮೬) ದಂದು ಶಾಲು ಹೊದಿಸಿ ಸತ್ಕರಿಸಿದ್ದಾರೆ. ೧೯೮೬ರಲ್ಲಿ "ಉದಗೀರ ಸಂಗ್ರಾಮಪ್ಪನವರು" ಪುಸ್ತಕ ರಚಿಸಿರುದರಿಂದ "ಸಂಗ್ರಾಮ ಡೇ" ಸಮಾರಂಭದಲ್ಲಿ ಶಾಲು ಹೊದಿಸಿ ಸತ್ಕರಿಸಲಾಗಿದೆ. ೧೯೯೧ರಲ್ಲಿ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಅಂದಿನ ಅಧ್ಯಕ್ಷರಾದ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿ ಅವರು ಕನ್ನಡ ಸೇವೆಗಾಗಿ ಶಾಲು ಹೊದಿಸಿ ಸನ್ಮಾನಿಸಿದ್ದಾರೆ. ೧೯೯೩ರಲ್ಲಿ ಭಾಲ್ಕಿಯ ಹಿರೇಮಠ ಸಂಸ್ಥಾನದಿಂದ ಡಾಕ್ಟರೇಟ ಪದವಿ ಪಡೆದುದಕ್ಕಾಗಿ ಬಿಜಾಪುರದ ಜ್ಞಾನಯೋಗಿ ಆಶ್ರಮದ ಶ್ರೀ ಸಿದ್ಧೇಶ್ವರ ಸ್ವಾಮಿಗಳವರಿಂದ ಶಾಲು ಹೊದಿಸಿ ಗೌರವಿಸಲಾಗಿದೆ. ೧೯೯೬ರಲ್ಲಿ ಭಾಲ್ಕಿಯಲ್ಲಿ ಕರ್ನಾಟಕ ರಾಜ್ಯೋತ್ಸವದಂದು ಕನ್ನಡ ಸೇವೆಗಾಗಿ ಅಂದಿನ ಸಾರಿಗೆ ಸಚಿವರಾದ ಶ್ರೀ ಭೀಮಣ್ಣ ಖಂಡ್ರೆ ಅವರು ಶಾಲು ಹೊದಿಸಿ ಸತ್ಕರಿಸಿದ್ದಾರೆ. ಕನಕದಾಸರ ಜಯಂತಿಯಂದು ೧೯೯೧ರಲ್ಲಿ ತಾಳಮಡಗಿಯಲ್ಲಿ (ಹುಮನಾಬಾದ ತಾಲ್ಲೂಕ) ಶ್ರೀ ಸಿದ್ಧಯ್ಯ ಒಡೆಯರ ಅವರಿಂದ ಶಾಲು ಹೊದಿಸಿ ಸನ್ಮಾನಿಸಲಾಯಿತು. ೧೯೯೪ರಲ್ಲಿ ಚಿಟಗುಪ್ಪಾ (ಹುಮನಾಬಾದ ತಾಲ್ಲೂಕು) ಸರ್ಕಾರಿ ಪದವಿ ಪೂರ್ವ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಡಾಕ್ಟರೇಟ ಪಡೆದುದ್ದಕ್ಕಾಗಿ ಶಾಲು ಹೊದಿಸಿ ಸನ್ಮಾನಿಸಲಾಗಿದೆ. ೧೯೯೬ರಲ್ಲಿ ನಾಲ್ವರ ಕೋರಿ ಸಿದ್ದೇಶ್ವರ ಸಂಸ್ಥಾನ ಮಠದಲ್ಲಿ ೧೦೨ನೇಯ ಶಿವಾನುಭವ ಚಿಂತನಗೋಷ್ಠಿಯಲ್ಲಿ ಪೂಜ್ಯರಿಂದ ಶಾಲು ಹೊದಿಸಿ ಸನ್ಮಾನಿಸಲಾಗಿದೆ. ೧೯೯೭ರಲ್ಲಿ ಗುಲಬರ್ಗಾದಲ್ಲಿ ಕನ್ನಡ ಪ್ರಾಧಿಕಾರದ ವತಿಯಿಂದ ಕನ್ನಡ ಜಾಗೃತಿ ಸಮ್ಮೇಳನದಲ್ಲಿ ಕನ್ನಡ ಸೇವೆಗಾಗಿ ಅಂದಿನ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ. ಚಂದ್ರಶೇಖರ ಪಾಟೀಲ ಅವರಿಂದ ಶಾಲು ಹೊದಿಸಿ ಸತ್ಕರಿಸಲಾಗಿದೆ. ೧೯೯೮ರಲ್ಲಿ ಶ್ರೀ ಶರಣಬಸವೇಶ್ವರ ಸಂಸ್ಥಾನದಿಂದ ಶಾಲು ಹೊದಿಸಿ ಸನ್ಮಾನಿಸಲಾಗಿದೆ. ೧೯೯೮ರಲ್ಲಿ ಭಾಲ್ಕಿಯ ಗ್ರಾಮೀಣ ಇಂಜಿನಿಯರಿಂಗ್ ಕಾಲೇಜಿನಲ್ಲಿ ಕರ್ನಾಟಕ ರಾಜ್ಯೋತ್ಸವದಲ್ಲಿ ಕನ್ನಡ ಸೇವೆಗಾಗಿ ಅಂದಿನ ಅಧ್ಯಕ್ಷರಾದ ಶ್ರೀ ಈಶ್ವರ ಖಂಡ್ರೆ ಅವರು ಶಾಲು ಹೊದಿಸಿ ಸನ್ಮಾನಿಸಿದ್ದಾರೆ. ೧೯೯೮ರಲ್ಲಿ ಭಾಲ್ಕಿ – ಭಾತಂಬ್ರಾ ವೀರಕ್ತ ಪೀಠದೀಶರಾದ ಶ್ರೀ ಶಿವಯೋಗಿಶ್ವರ ಮಹಾಸ್ವಾಮಿಗಳು ಶಾಲು ಹೊದಿಸಿ ಗೌರವಿಸಿದ್ದಾರೆ. ಕ್ರಿ.ಶ. ೨೦೦೦ ರಲ್ಲಿ ಭಾಲ್ಕಿ ಯೇಸು ನಿಲಯದ ಕೇಥೋಲಿಕ ಧರ್ಮ ಸಭೆಯ ಜಾತ್ರಾ ಉತ್ಸವದಲ್ಲಿ ಪ್ರಶಸ್ತಿ ಪತ್ರದೊಂದಿಗೆ ವಿಶೇಷ ಸನ್ಮಾನ ಮಾಡಿ ಗೌರವಿಸಲಾಗಿದೆ. ಈ ಸಮಾರಂಭದಲ್ಲಿ ಫಾದರ ರಾಬರ್ಟ ಮಿರಾಂದಾ ಮತ್ತು ಫಾದರ ಸಂತೋಷ ಡಾಯಸ ಹಾಜರಿದ್ದರು. "ಸರಳ ಜೀವನ ಉನ್ನತ ಚಿಂತನ" ಎಂಬ ನಾಣ್ಣುಡಿಯಂತೆ ಸರಳ ಜೀವನದಿಂದ ಉನ್ನತ ವಿಚಾರಗಳನ್ನು ಹೊಂದಿದವರಾಗಿದ್ದೀರಿ. ನೀವು ಬೆಳೆದು ಇತರರನ್ನು ಬೆಳೆಸಲು ನಿಮ್ಮ ಪ್ರಯತ್ನ ಹಲವಾರು ರೀತಿಯಲ್ಲಿ ಫಲದಾಯಕವಾಗಿದೆ. ಎಂಬುದಕ್ಕೆ ನಿಮ್ಮ ವಿದ್ಯಾರ್ಥಿಗಳು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಮುನ್ನಡೆಯೇ ಸಾಕ್ಷಿ, ಸಮಾಜದ ಆಗು ಹೋಗುಗಳಿಗೆ ಸ್ಪಂದಿಸಿ ಜಾತಿ, ಧರ್ಮ ಕುಲವೆನ್ನದೆ ಎಲ್ಲಿ ಸತ್ಯ ವಿದೆ ಎಲ್ಲಿ ಒಳಿತು ನಡೆಯುತ್ತದೆ ಅದನ್ನು ಗುರುತಿಸಿ ಅದನ್ನು ತುಂಬು ಮನಸ್ಸಿನಿಂದ ನೀವು ಸ್ವೀಕರಿಸುತ್ತಾ ಬಂದಿರುವುದು ನಮಗೆ ಅತೀವ ಸಮಾಧಾನವನ್ನು ತಂದು ಕೊಟ್ಟಿದೆ. ಯೇಸು ಕ್ರಿಸ್ತ ಜಯಂತಿ ೨೦೦೦ರ ಪ್ರಯುಕ್ತ ಕೆಥೋಲಿಕ ಧರ್ಮ ಸಭೆಯ ಹಮ್ಮಿಕೊಂಡ ಜಾತ್ರಾ ಉತ್ಸವ ಈ ಸಂದರ್ಭದಲ್ಲಿ ನಾವು ನಿಮ್ಮನ್ನು

ಅಭಿನಂದಿಸುತ್ತೇವೆ. ನಿಮ್ಮ ಸಾಧನೆಗೆ ತಲೆ ಬಾಗುತ್ತೇವೆ. ನಿಮ್ಮ ಬಾಳು ಎಂದೆಂದಿಗು ಬೆಳಗಲಿ ಎಂದು ಹಾರೈಸುತ್ತೇವೆ. ಎಂದು ಆ ಪ್ರಶಸ್ತಿ ಪತ್ರದಲ್ಲಿ ಪ್ರಕಟಿಸಿದ್ದಾರೆ.

ಕ್ರಿ.ಶ. ೨೦೦೦ರಲ್ಲಿ ಹುಲಸೂರು ಗುರುಬಸವ ಸಂಸ್ಥಾನ ಮಠದಲ್ಲಿ ಶಾಲು ಹೊದಿಸಿ ಗೌರವಿಸಲಾಗಿದೆ. ೨೦೦೩ರಲ್ಲಿ ಶ್ರಿ ಸಿದ್ದಗಂಗಾ ಸಂಸ್ಥಾನ ಮಠದಿಂದ ಶಾಲು ಹೊದಿಸಿ ಸತ್ಕರಿಸಲಾಗಿದೆ. ೨೦೦೩ರಲ್ಲಿ ಕೂಸನೂರ ಮಠದ ಸ್ವಾಮಿಗಳ ಅವರಿಂದ ಶಾಲು ಹೊದಿಸಿ ಸತ್ಕರಿಸಲಾಗಿದೆ. ೨೦೦೩ರಲ್ಲಿ ಕೋಹಿನೂರಿನಲ್ಲಿ "ಗಡಿನಾಡ ಉತ್ಸವ"ದಲ್ಲಿ ಶಾಲು ಹೊದಿಸಿ ಸ್ಮರಣಿಕೆ ನೀಡಿ ಗೌರವಿಸಲಾಗಿದೆ. ಆ ಸಮಾರಂಭದಲ್ಲಿ ಸಮಾಜ ಸೇವಕ ಬಸವರಾಜ ವರ್ಕಲೆ ಅವರಿದ್ದರು. ಡಾ. ಜಿ.ಬಿ.ವಿಸಾಜಿ ಅವರಿಗೆ ೨೦೦೬ರಲ್ಲಿ "ಕನ್ನಡ ದೀಪ" ಅಭಿನಂದನ ಗ್ರಂಥವನ್ನು ಅಭಿನಂದನಾ ಪತ್ರದೊಂದಿಗೆ ಶಾಲು ಹೊದಿಸಿ ಅವರ ಹಿತೈಷಿಗಳು ಆತ್ಮಿಗಳು ಬಹುವಿಜೃಂಬಣೆಯಿಂದ ಸಮಾರಂಭವನ್ನು ಏರ್ಪಡಿಸಿದರು. "ಭಾಲ್ಕಿ ತಾಲ್ಲೂಕ ಧರಿನಾಡು ಕನ್ನಡ ಸಂಘದ ಗೌರವ ಅಧ್ಯಕ್ಷರಾಗಿ ದುಡಿಯುತ್ತಿರುವಿರಿ. ಕೋಹಿನೂರು ಗೆಳೆಯರ ಬಳಗ, ಚನ್ನಬಸವ ಪಟ್ಟದ್ದೇವರು ಕನ್ನಡ ಸಂಘ, ಭಾಲ್ಕಿ ತಾಲ್ಲೂಕ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕ ಅಧ್ಯಕ್ಷರಾಗಿ ತಮ್ಮ ತನು, ಮನ, ಧನ ಸವೀಸಿದ್ದೀರಿ. ಸಾಕ್ಷರತಾ ಆಂದೋಲನದಲ್ಲಿ ಪಠ್ಯಪುಸ್ತಕ ರಚನಾಕಾರರಾಗಿಯೂ ಸಂಪನ್ಮೂಲ ವ್ಯಕ್ತಿಯಾಗಿಯು ದುಡಿದಿದ್ದೀರಿ. ದೇವಿ ನಗರದ ನವರಾತ್ರಿ ಉತ್ಸವದಲ್ಲಿ ಭಾಲ್ಕಿಯಲ್ಲಿ ಕನ್ನಡ ಕಾರ್ಯಕ್ರಮದ ಬೀಜ ಬಿತ್ತುವ ಮೂಲಕ ಕನ್ನಡ ಸಾಹಿತ್ಯದ ವಾತಾವರಣವನ್ನು ನಿರ್ಮಿಸಿದ್ದೀರಿ. ಪೂಜ್ಯ ಡಾ. ಚನ್ನಬಸವ ಪಟ್ಟದ್ದೇವರ ಕನ್ನಡ ಸಂಕಲ್ಪವನ್ನು ನೆರವೇರಿಸುತ್ತಿರುವ ಕನ್ನಡದ ಕಟ್ಟಾಳಾಗಿದ್ದೀರಿ. ವಚನ ಸಂಸ್ಕೃತಿಗೆ ಬೆಂಬಲವಾಗಿದ್ದೀರಿ. ಕನ್ನಡ ಪ್ರಾಧ್ಯಾಪಕ ವೃತ್ತಿಯಿಂದ ತಾವು ನಿವೃತ್ತರಾದರು ಕನ್ನಡ ಸೇವೆಯಿಂದ ತಾವು ನಿವೃತ್ತಿ ಹೊಂದದೆ ದುಡಿಯುತ್ತಿದ್ದೀರಿ. ಹಸ್ತಪ್ರತಿ ಅಭಿಯಾನದ ಜಿಲ್ಲಾ ಮಟ್ಟದ ನಿರ್ವಾಹಕರಾಗಿ ತಮ್ಮ ಚಾಕಚಕ್ಯತೆ ಪ್ರದರ್ಶಿಸಿದ್ದೀರಿ. ತಮಗೆ ಆಯುಷ್ಯ ಆರೋಗ್ಯ ಸಮೃದ್ಧಿಗಳು ನಿರಂತರ ಒದಗಿ ಬರಲೆಂದು ನಾವೆಲ್ಲರು ಅಭಿಮಾನದಿಂದ ಹಾರೈಸುತ್ತೇವೆ. ಎಂದು ಅಭಿನಂದನಾ ಪತ್ರದಲ್ಲಿ ಬರೆಯಲಾಗಿದೆ. ಈ ಸಮಾರಂಬವನ್ನು ಪೂಜ್ಯ ಬಸವಲಿಂಗ ಪಟ್ಟದ್ದೇವರು, ಶ್ರೀ ದೇಶಾಂತ ಹುಡಗಿ, ಶ್ರೀ ಹಂಶಕವಿ, ಅವರು ಏರ್ಪಡಿಸಿದ್ದರು.

ಶ್ರೀ ಪ್ರಭುದೇವರ ಸಂಸ್ಥಾನ ಮಠ ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಅವರಿಂದ ೨೦೦೭ರಲ್ಲಿ ಕನ್ನಡ ಸಾಹಿತ್ಯ ಸೇವೆಗಾಗಿ ಶಾಲು ಹೊದಿಸಿ ಸ್ಮರಣಿಕೆಯೊಂದಿಗೆ ಸತ್ಕರಿಸಲಾಗಿದೆ. ಶ್ರೀ ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ ಬಸವಕಲ್ಯಾಣ ಅವರಿಂದ ೨೦೦೬ರಲ್ಲಿ "ಸಾಹಿತ್ಯ ರತ್ನ" ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ಈ ಸಮಾರಂಭದಲ್ಲಿ ಪ್ರಾಚಾರ್ಯರಾದ ಪ್ರಭುಲಿಂಗಯ್ಯ ಟಂಕಸಾಲಿಮಠ ಮಾಜಿ ಶಾಸಕರಾದ ಎಂ.ಜಿ. ಮೂಳೆ ಹಾಗೂ ಹುಲಸೂರಿನ ಗುರು ಬಸವೇಶ್ವರ ಸಂಸ್ಥಾನ ಮಠದ ಪೂಜ್ಯ ಶಿವಾನಂದ ಮಹಾಸ್ವಾಮಿಗಳವರು ಉಪಸ್ಥಿತರಿದ್ದರು. ಪೂಜ್ಯ ಶ್ರೀ ಸಿದ್ದಲಿಂಗ ಮಹಾಸ್ವಾಮಿಗಳು ತೋಂಟದಾರ್ಯ ಮಠ ಗದಗ, ಅವರಿಂದ ಡಾ. ಜಿ.ಬಿ. ವಿಸಾಜಿ ಅವರಿಗೆ ಸತ್ಕರಿಸಲಾಗಿದೆ. ಹೊಸಪೇಟೆಯಲ್ಲಿ ಸಂಗನಬಸವ ಮಹಾಸ್ವಾಮಿಗಳವರಿಂದ

ಸತ್ಕರಿಸಲಾಗಿದೆ. ೨೦೦೬ರಲ್ಲಿ ಪ್ರತಿಭಾವಂತ ಸಂಸದೀಯ ಪಟು ಬರಹಗಾರರೆಂದು ಡಾ. ಜಿ.ಬಿ. ವಿಸಾಜಿ ಅವರನ್ನು ಮಾಜಿ ಮುಖ್ಯಮಂತ್ರಿ ಎನ್. ಧರ್ಮಸಿಂಗ ಅವರು ಬೆಂಗಳೂರಿನ ವಿಧಾನ ಸೌಧದಲ್ಲಿ ಶಾಲು ಹೊದಿಸಿ ಸತ್ಕರಿಸಿದ್ದಾರೆ. ಡಾ. ಜಿ.ಬಿ. ವಿಸಾಜಿ ಅವರನ್ನು ಬಸವಕಲ್ಯಾಣದ ಪ್ರಪ್ರಥಮ ತಾಲ್ಲೂಕ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಲಾಗಿದೆ. ೨೦೦೧ರಲ್ಲಿ ಬೀದರ ಜಿಲ್ಲಾ ಆರನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಲಾಗಿದೆ. ಡಾ. ಜಿ.ಬಿ. ವಿಸಾಜಿ ಅವರಿಗೆ "ಸುವರ್ಣ ಕನ್ನಡಿಗ" ಪ್ರಶಸ್ತಿ ನೀಡಿ ಪುರಸ್ಕರಿಸಲಾಯಿತು. ಈ ಸಮಾರಂಭದಲ್ಲಿ ಶ್ರೀ ಚನ್ನವೀರ ಶಿವಾಚಾರ್ಯರು ಹಾರಕೂಡ ಸಿದ್ಧರಾಮ ಶರಣರು ಬೆಲ್ದಾಳ, ಶಾಸಕ ರಾಜಶೇಖರ ಪಾಟೀಲ, ಶಾಸಕ ಬಸವರಾಜ ಪಾಟೀಲ ಅಟ್ಟೂರ, ಮಾಜಿ ಶಾಸಕ ಮಲ್ಲಿಕಾರ್ಜುನ ಖೂಬಾ ಶ್ರೀ ಸಂಗಾನಂದ ಭಂತೆ, ಶ್ರೀ ಮಿಲಿಂದ ಗುರುಜಿ ಭಾಗವಹಿಸಿದ್ದರು. ಡಾ. ಜಿ.ಬಿ. ವಿಸಾಜಿ ಅವರಿಗೆ ಅವರ ಕನ್ನಡ ಸೇವೆಯನ್ನು ಗುರುತಿಸಿ ಅನೇಕ ಪ್ರಶಸ್ತಿ ಮತ್ತು ಗೌರವಗಳು ದೊರಕಿವೆ.

**ವ್ಯಕ್ತಿತ್ವ :**

ಡಾ. ಜಿ.ಬಿ. ವಿಸಾಜಿ ಅವರು ಬೀದರ ಜಿಲ್ಲೆಯ ಹಿರಿಯ ಲೇಖಕರಾಗಿದ್ದಾರೆ. ತಾವು ಬೆಳೆಯುವದರೊಂದಿಗೆ ಅನೇಕ ಲೇಖಕರನ್ನು ಬೆಳೆಸಿದವರು. ಅವರು ಬೀದರ ಜಿಲ್ಲೆಯ ಕನ್ನಡದ ಆಸ್ತಿಯಾಗಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ಸಂಘಟನಾ ಚತುರರು ಬಾಲ್ಯದಲ್ಲಿಯೆ ಅವರಿಗೆ ಅನೇಕ ಗೆಳೆಯರಿದ್ದರು. ಆದ್ದರಿಂದ ಅವರು ೧೯೬೨ರಲ್ಲಿಯೇ ಕೋಹಿನೂರಿನಲ್ಲಿ ಗೆಳೆಯರ ಬಳಗ ಸ್ಥಾಪಿಸಿ ರಚನಾತ್ಮಕ ಕಾರ್ಯಗಳನ್ನು ಕೈಗೊಂಡಿದ್ದಾರೆ. ಗ್ರಂಥಾಲಯಗಳನ್ನು ಸ್ಥಾಪಿಸಿದ್ದಾರೆ. ಅನೇಕ ರಾಷ್ಟ್ರೀಯ ಪುರುಷರ ಜಯಂತಿಗಳನ್ನು ಆಚರಿಸಿದ್ದಾರೆ. ಜಾನಪದ ಗಾಯಕರ ಸಮ್ಮೇಳನ ಏರ್ಪಡಿಸಿದರು. ಗಾಂಧಿ ಜಯಂತಿಯಂದು ಗೆಳೆಯರೊಂದಿಗೆ ಇಡೀ ಗ್ರಾಮ ಸ್ವಚ್ಛಗೊಳಿಸಲು ಶ್ರಮದಾನ ಕಾರ್ಯ ಕೈಗೊಂಡಿದ್ದರು. ಅವರು ನರೋಣದಲ್ಲಿ ಪ್ರೌಢ ಶಾಲಾ ಶಿಕ್ಷಕರಾಗಿದ್ದಾಗ ಅನೇಕ ವಿದ್ಯಾರ್ಥಿಗಳಿಗೆ ಶಿಕ್ಷಣ ಪಡೆಯಲು ಪ್ರೋತ್ಸಾಹಿಸಿದರು. ವಿದ್ಯಾರ್ಥಿದೆಸೆಯಲ್ಲಿಯೇ ನೆಲದನುಡಿ-೧, ನೆಲದನುಡಿ-೨ ಗ್ರಂಥಗಳನ್ನು ಪ್ರಕಟಿಸಿದರು. ಅನೇಕ ಯುವ ಲೇಖಕರಿಗೆ ತರಬೇತಿ ನೀಡಿ ಬೆಳೆಯಿಸಿ ಬೀದರ ಜಿಲ್ಲೆಯಲ್ಲಿ ಲೇಖಕರ ತಂಡವನ್ನು ನಿರ್ಮಿಸಿದ್ದಾರೆ. ಡಾ. ಜಿಬಿ. ವಿಸಾಜಿ ಅವರು ಎಲ್ಲದರಲ್ಲೂ ಕನ್ನಡ ಪಾರಮ್ಯತೆ ಇರಬೇಕೆಂಬುದು ಅವರ ಕಕ್ಕುಲತ, ಕನ್ನಡ ವಿಭಾಗ, ಕನ್ನಡದ ಮಕ್ಕಳು, ಕನ್ನಡದ ಅಧ್ಯಾಪಕರು, ಅವರ ಸಾಧನೆಗಳೆಂದರೆ ಅವರಿಗೆ ಹಾಲು ಕುಡಿದಷ್ಟು ಸಂತೋಷ, ಭಾಲ್ಕಿಯನ್ನು ಕನ್ನಡಮಯಗೊಳಿಸುವುದಕ್ಕಾಗಿ ಕನ್ನಡ ಸಂಘ, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ರಕ್ಷಣಾ ವೇದಿಕೆ, ಇತ್ಯಾದಿ ಕನ್ನಡ ಸಂಘಟನೆಗಳೊಂದಿಗೆ ನಿರಂತರ ಸಂಪರ್ಕವಿಟ್ಟುಕೊಂಡು ನಿರಂತರ ಸ್ಪರ್ಧೆಗಳು, ಸಂವಾದಗಳು, ವಿಚಾರ ಸಂಕೀರಣಗಳು ನಡೆಯಿಸಿ ಕನ್ನಡದ ಗಮಗಮ ಹೆಚ್ಚಿಸಲು ಕಾರಣರಾಗಿದ್ದಾರೆ.

ಅವರದು ಸಜ್ಜನಿಕೆಯ ಬದುಕು, ಸರಳ ಮತ್ತು ಸಂತೃಪ್ತ ಸಂಸಾರಿಕ ಜೀವನ, ಉಡುಪಿನಲ್ಲಿಯೂ ಅಚ್ಚುಕಟ್ಟುತನ, ಒಪ್ಪು ಓರಣಗಳಿಂದ ಗಮನ ಸೆಳೆಯುವ ಅವರು ನೆಲದಾಳದಲ್ಲಿ ಬೇರು ಬಿಟ್ಟು ಮರವಾಗಿ ಗಗನ ಮುಟ್ಟುವ ಮಹಾದಾಸೆ ಹೊಂದಿದ್ದಾರೆ. ಕಪಟತನ, ಆಷಾಡಭೂತಿತನವನ್ನು ಅವರು ನಿರ್ಭಿಡೆಯಿಂದ ಖಂಡಿಸುತ್ತಾರೆ. ಅವರು ನಂಬಿದ ವಿಚಾರಗಳಿಗೆ ತತ್ವಗಳಿಗೆ ಗಟ್ಟಿಯಾದ ಬದ್ಧತೆಯನ್ನು ಹೊಂದಿದವರಾಗಿದ್ದಾರೆ. ಅವರು ಕೀರ್ತಿ ಶನಿಗೆ ಬೆಂಬತ್ತಿದವರಲ್ಲ. ಅವರದ್ದು ಬಹುಮುಖ ಪ್ರತಿಭೆ ಮತ್ತು ಪ್ರಯೋಗಶೀಲ ಮನಸ್ಸು ಉಳ್ಳವರು. ಡಾ. ಜಿ.ಬಿ. ವಿಸಾಜಿ ಅವರಿಗೆ ಪ್ರತಿಭೆಗಳು ಎಲ್ಲೆ ಇದ್ದರೂ ಹುಡುಕಿ ತೆಗೆಯುವ ಕಣ್ಣುಗಳಿವೆ. ಡಾ. ಜಿ.ಬಿ. ವಿಸಾಜಿ ಅವರು ಪರಿಣಾಮಕಾರಿ ವಾಗ್ಮಿಗಳಾಗಿದ್ದಾರೆ. ಅವರ ಭಾಷಣಕ್ಕೆ ಪೂರ್ವ ಸಿದ್ಧತೆ ಸಾಕಷ್ಟಿರುತ್ತವೆ. ವಿಷಯದ ಆರಂಭ, ವಿಷಯದ ಕ್ರಮವಾದ ನಿರೂಪಣೆ, ಪರಿಣಾಮಕಾರಿ ಸಮಾರೋಪ ಇವುಗಳಿಂದ ಅವರು ಅನೇಕರ ಪ್ರೀತಿಗೆ ಪಾತ್ರರಾಗಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ಸಂಸ್ಕೃತಿಯ ಸಂವಾಹಕರಾಗಿದ್ದಾರೆ. ಬೀದರ ಜಿಲ್ಲೆಯ ಬೆಳ್ಳಿ ಚುಕ್ಕಿಯಾಗಿದ್ದಾರೆ. ಈ ಭಾಗದ ಸಾಹಿತ್ಯದ ಸುಗ್ಗಿಗೆ ಉತ್ತಮೋತ್ತಮ ಬೀಜಗಳನ್ನು ನೀಡಿದ್ದಾರೆ.

ಅವರದು ಸದಾ ಅಧ್ಯಾಯನಶೀಲ ಪ್ರವೃತ್ತಿ. ಅಧ್ಯಾಪನ ಅವರ ಮೆಚ್ಚುಗೆಯ ವೃತ್ತಿ ಅವರು ನಿರಂತರ ಕ್ರಿಯಾಶೀಲತ ಜೀವಾನೋತ್ಸಾಹ ಹೊಂದಿದ್ದವರಾಗಿದ್ದಾರೆ. ಅವರಲ್ಲಿ ಬೌದ್ಧಿಕ ಅಹಂಕಾರವಾಗಲಿ, ಸುಖದ ಅತಿಯಾಸೆಯಾಗಲಿ, ವೃತ್ತಿ ಮಾತ್ಸರ್ಯ್ಯದ ದಳ್ಳುರಿಯಾಗಲಿ, ಕಾಲು ಹಿಡಿದು ಎಳೆಯುವ ಪ್ರವೃತ್ತಿಯಾಗಲಿ ಅವರಲ್ಲಿಲ್ಲ. ಅವರು ಸಭ್ಯ ಸ್ನೇಹಿತರಾಗಿ ತಮ್ಮವಾದವನ್ನು ಹೇರದೆ ಅನ್ಯರ ಅಭಿಪ್ರಾಯಕ್ಕು ಬೆಲೆ ಕೊಡುವ ಅಭಿಜಾತ ಗುಣವುಳ್ಳವರಾಗಿದ್ದಾರೆ. ಅವರು ಈ ನೆಲದ ಸಾಂಸ್ಕೃತಿಕ ಪರಂಪರೆಯನ್ನು ಹೆಚ್ಚಿಸಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರದ್ದು ತುಂಬಿದ ಕುಟುಂಬ ಹೆಂಡತಿ, ಇಬ್ಬರು ಗಂಡು ಮಕ್ಕಳು. ಇಬ್ಬರು ಹೆಣ್ಣು ಮಕ್ಕಳು. ಮೊಮ್ಮಕ್ಕಳಿಂದ ತುಂಬಿದೆ. ಅವರ ಕಿರಿಯ ಮಗ ಡಾ. ವಿಕ್ರಮ ವಿಸಾಜಿ ರಾಜ್ಯ ಮಟ್ಟದ ರಾಷ್ಟ್ರಮಟ್ಟದ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ.

ಪ್ರತಿಯೊಬ್ಬ ಸಾಧಕರ ಹಿಂದೆ ಮಹಿಳೆಯೊಬ್ಬಳ ಸಹಕಾರ ಸಹಾಯ ಇದ್ದೆ ಇರುತ್ತದೆ. ಡಾ. ಜಿ.ಬಿ. ವಿಸಾಜಿ ಅವರ ಸಾಧನೆಯ ಹಿಂದೆ ಅವರ ಧರ್ಮ ಪತ್ನಿ ಶ್ರೀಮತಿ ಕಲಾವತಿ ವಿಸಾಜಿ ಅವರ ಶ್ರಮವಿದೆ. ಕುಟುಂಬದ ಸಂಪೂರ್ಣ ಜವಾಬ್ದಾರಿ ಅವರೇ ವಹಿಸಿಕೊಂಡಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ಉತ್ತಮ ಉಪನ್ಯಾಸಕರು ಶ್ರೇಷ್ಠ ಮಟ್ಟದ ಭಾಷಣಕಾರರು ಅವರ ಮಾತನ್ನು ಆಲಿಸಿದರೆ ಹತ್ತಾರು ಪುಸ್ತಕಗಳು ಓದಿದ ಅನುಭವವಾಗುತ್ತದೆ. ಅವರ ರೇಡಿಯೋ ಚಿಂತನೆಗಳು ಅನೇಕ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಅವರು ಕನ್ನಡ ಪ್ರೇಮಿಗಳು ಸ್ನೇಹಜೀವಿಯಾಗಿದ್ದಾರೆ. ಅವರಿಗೆ ರಾಜ್ಯದಲ್ಲಿಯು ಹೊರರಾಜ್ಯದಲ್ಲಿಯು ಅನೇಕ ಜನ ಸಾಹಿತಿ ಮಿತ್ರರಿದ್ದಾರೆ. ಅವರು ಬೀದರ ಜಿಲ್ಲೆಯ ಗಡಿಭಾಗದಲ್ಲಿ ಕನ್ನಡ ಬೆಳವಣಿಗೆಗಾಗಿ ಸದಾ

ದುಡಿಯುತ್ತಿದ್ದಾರೆ. ಕನ್ನಡಕ್ಕಾಗಿ ದುಡಿಯುವವರಿಗೆ, ಸಂಘ ಸಂಸ್ಥೆಗಳಿಗೆ, ಬೆಂಬಲಿಸುತ್ತಾರೆ. ಅವರು ಈ ಭಾಗದಲ್ಲಿ ಕನ್ನಡದ ಹಿರಿಯ ಚೇತನರಾಗಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ಪತ್ರಿಕೋದ್ಯಮದಲ್ಲಿಯು ತೊಡಗಿಕೊಂಡಿದವರಾಗಿದ್ದಾರೆ. ಸಾಹಿತ್ಯಿಕ ಪತ್ರಿಕೆಗಳ ಮೆಲೆ ಅವರಿಗೆ ಅಪಾರ ಪ್ರೀತಿ ಅವರ ಮನೆಗೆ ಬರುತ್ತಿರುವ ವೈವಿಧ್ಯಮಯ ಅಗ್ರಗಣ್ಯ ಪತ್ರಿಕೆಗಳು ಬೀದರ ಜಿಲ್ಲೆಯ ಮತ್ತೊಬ್ಬ ಸಾಹಿತಿಯ ಮನೆಯಲ್ಲಿ ನಾವು ಕಾಣಲಾರೆವು. ಅವರು "ಶಾಂತಿಕಿರಣ" ಪತ್ರಿಕೆಯ ಪ್ರಧಾನ ಸಂಪಾದಕರಾಗಿ, ಪ್ರಜಾವಾಣಿ ಪತ್ರಿಕೆಯ ವರದಿಗಾರರಾಗಿ, ರಾಜೋಳೆ ಸಂಘರ್ಷ ಪತ್ರಿಕೆಯ ಗೌರವ ಸಂಪಾದಕರಾಗಿ ಗಣನೀಯ ಸೇವೆಯನ್ನು ಪತ್ರಿಕಾ ಕ್ಷೇತ್ರಕ್ಕೆ ಸಲ್ಲಿಸಿದ್ದಾರೆ. ಅವರು ವಿದ್ಯಾರ್ಥಿಗಳಲ್ಲಿ ಕನ್ನಡ ಪ್ರೇಮ , ಸಾಹಿತ್ಯ ಪ್ರೇಮ, ಪತ್ರಿಕಾ ಪ್ರೇಮ, ಸಮಾಜ ಸೇವೆಯಂತಹ ಗುಣಗಳನ್ನು ಬೆಳೆಯಿಸಿದ್ದಾರೆ. ಆದ್ದರಿಂದ ಡಾ. ಜಿ.ಬಿ. ವಿಸಾಜಿ ಅವರು ಒಬ್ಬ ಸರಳ ಮತ್ತು ಸದಾ ಜೀವನ ನಡೆಸುವ ಸದಾ ಅಧ್ಯಯನದಲ್ಲಿ ನಿರತರಾದ ಬರವಣಿಗೆಯಲ್ಲಿ ತೊಡಗಿರುವ ವೃತ್ತಿ ಮತ್ತು ಸಮಾಜ ಎರಡರ ಉನ್ನತಿಯನ್ನು ಬಯಸುವ ಧೀಮಂತ ಸಾಹಿತಿಯಾಗಿದ್ದಾರೆ. ಸ್ನೇಹಜೀವಿಗಳಾಗಿದ್ದಾರೆ. ಸಂಸ್ಕೃತಿಯ ಸಂವಾಹಕರಾಗಿದ್ದಾರೆ.

## ಅಧ್ಯಾಯ–೩

## ಡಾ.ಜಿ.ಬಿ. ವಿಸಾಜಿ ಅವರ ಸಮಗ್ರ ಸಾಹಿತ್ಯ ವಿವೇಚನೆ

೧) ಕಥಾ ಸಂಕಲನ

- ಅನಂತ ಸಂಗಮ

೨) ಕವನ ಸಂಕಲನಗಳು

- ಮುಂಜಾವು
- ಮುಂಜಾವಿನಿಂದ ಮುಸ್ಸಂಜೆಯವರೆಗೆ

೩) ಪ್ರಬಂಧ ಸಂಕಲನಗಳು

- ಸಾಹಿತ್ಯಾಲೋಕನ
- ಭಾವಬಿಂಬ
- ಚಿಂತನ ದೀಪಿಕೆ
- ಬೆಳಕಿನೆಡೆಗೆ
- ಸಾಲುದೀಪ

೪) ಜೀವನ ಚರಿತ್ರೆಗಳು

- ಉದಗೀರ ಸಂಗ್ರಾಮಪ್ಪನವರು
- ಶ್ರೀ ಚೆನ್ನಬಸವ ಪಟ್ಟದ್ದೇವರು
- ಕೊಳ್ಳೂರು ಹುಸನಾಸಾಹೇಬರು
- ಶ್ರೀ ಕೇಶವರಾವ ನಿಟ್ಟೂರಕರ
- ಉರಿಲಿಂಗ ಪೆದ್ದಿ
- ಡಾ. ಚನ್ನಬಸವ ಪಟ್ಟದ್ದೇವರು
- ಹರಿಹರ

೫) ಸಂಪಾದನ ಸಾಹಿತ್ಯ

- ನೆಲದನುಡಿ–೧
- ನೆಲದನುಡಿ–೨

- ಶಾಂತಿಕಿರಣ
- ವಿನಯಭಂಡಾರಿ
- ಹರಿಹರದೇವನ ನಾಲ್ಕು ರಗಳೆಗಳು
- ಚೆಂಬೆಳಕು
- ಕೊಳ್ಳೂರು ಹುಸನಾಸಾಹೇಬರು
- ಅಲ್ಲಮಪ್ರಭು ದೇವರ ವಚನಗಳು

೬) ಸಂಶೋಧನಾ ಸಾಹಿತ್ಯ

೭) ಪತ್ರಿಕೋದ್ಯಮ ಸಾಹಿತ್ಯ

೮) ಹಸ್ತಪ್ರತಿ ಅಭಿಯಾನ

೯) ಇತರೆ ಸಾಹಿತ್ಯ

- ಭಾಲ್ಕಿ ತಾಲ್ಲೂಕ ದರ್ಶನ

## ಅಧ್ಯಾಯ–೩

## ಡಾ.ಜಿ.ಬಿ. ವಿಸಾಜಿ ಅವರ ಸಮಗ್ರ ಸಾಹಿತ್ಯ ವಿವೇಚನೆ :

ಡಾ. ಜಿ.ಬಿ. ವಿಸಾಜಿ ಅವರು ಕಥೆ, ಕವನ, ವ್ಯಕ್ತಿಚಿತ್ರ, ಪ್ರಬಂಧ, ಸಂಪಾದನೆ, ಪತ್ರಿಕೋದ್ಯಮ, ಕ್ಷೇತ್ರಗಳಲ್ಲಿ ಕಾರ್ಯ ಮಾಡಿದ್ದಾರೆ. ಇಲ್ಲಿಯವರೆಗೆ ಅವರ ೨೬ ಪುಸ್ತಕಗಳು ಪ್ರಕಟವಾಗಿವೆ. ಇಲ್ಲಿ ಅವರ ಸಮಗ್ರ ಸಾಹಿತ್ಯವನ್ನು ಕುರಿತು ವಿವೇಚಿಸಲಾಗಿದೆ.

**೧) ಕಥಾಸಂಕಲನ :**

ಒಂದು ವಿಷಯಕ್ಕೆ ತಕ್ಕಂತೆ ಶೈಲಿ, ಭಾಷೆ, ವಿಧಾನ ಈ ಗುಣಗಳಿಂದ ಒಂದು ಕಥೆ ಉತ್ತಮವಾಗುತ್ತದೆ. ಸಾಮಾನ್ಯವಾಗಿ ಕಥಾಸಂಕಲನದಲ್ಲಿ ಭಕ್ತಿ, ಶೃಂಗಾರ, ನೀತಿ, ಸಾಹಸ, ವೀರರ ಚರಿತ್ರೆಗಳು ಸೇರಿರುತ್ತವೆ.

ಬೀದರ ಜಿಲ್ಲೆಯಲ್ಲಿ ಮೊದಲಿಗೆ ಕಥೆಗಳನ್ನು ಬರೆಯಲು ಆರಂಭಿಸಿದವರು ಡಾ. ಜಿ.ಬಿ. ವಿಸಾಜಿ. ಇವರ "ಅನಂತ ಸಂಗಮ" (೧೯೬೯) ಐದು ಕಥೆಗಳನ್ನು ಒಳಗೊಂಡಿದೆ.

೧. ಅನಂತ ಸಂಗಮ
೨. ಪುಲಕಸ್ಮೃತಿ
೩. ಹುಚ್ಚು ಮನಸ್ಸಿನ ಹೂಬಾಣಗಳು
೪. ಮಲ್ಲಪ್ಪಾ ಹಿರಿ ಹಿರಿ ಹಿಗ್ಗಿದ
೫. ಒಬ್ಬರ ಹಾಸಿಗೆಯಲ್ಲಿ ಮತ್ತೊಬ್ಬರ ಕಾಲು

"ಅನಂತ ಸಂಗಮ" ಕಥೆಯಲ್ಲಿ ಎರಡು ಉದಾತ್ತ ಹೃದಯಗಳ ಸಮ್ಮಿಲನವನ್ನು ಕಾಣುತ್ತೇವೆ. "(Happy Union of Two Noble Souls)"[೧] "ಪುಲಕ ಸ್ಮೃತಿ" ಯಲ್ಲಿ ಒಬ್ಬ ಯುವಕನ ಕಲ್ಪನಾ ಲೋಕದ ಚಿತ್ರಣವಿದೆ. "ಹುಚ್ಚು ಮನಸ್ಸಿನ ಹೂಬಾಣಗಳು" ಕಥೆಯಲ್ಲಿ ಎರಡು ಮನೆ ಮತ್ತು ಎರಡು ಮನಗಳ ಜೀವನದ ಕ್ಷಣಗಳನ್ನು ಬಿಚ್ಚಿ ತೋರಿಸಲಾಗಿದೆ. "ಮಲ್ಲಪ್ಪಾ ಹಿರಿ ಹಿರಿ ಹಿಗ್ಗಿದ" ಈ ಕಥೆಯಲ್ಲಿ ಮಲತಾಯಿಯ ಅಸೂಯೆ ಮಲಮಗನ ಸರಳ ಹೃದಯ ಮನಸ್ಸಿಗೆ ಮುಟ್ಟುವಂತೆ ಚಿತ್ರಿಸಲಾಗಿದೆ. "ಒಬ್ಬರ ಹಾಸಿಗೆಯಲ್ಲಿ ಮತ್ತೊಬ್ಬರ ಕಾಲು" ಈ ಕಥೆಯಲ್ಲಿ ಕಾಮದ ಮೂಲ ಸಮಸ್ಯೆಗೆ ಸಮಾಧಾನ ಹುಡುಕುವ ಪ್ರಯತ್ನ ಮಾಡಲಾಗಿದೆ. ಈ ಕಥಾ ಸಂಕಲನಕ್ಕೆ ಪ್ರಾಚಾರ್ಯ ಎಸ್.ಎಂ. ಕಪ್ಪಿಕೇರಿ ಅವರು ಮುನ್ನುಡಿ ಬರೆದಿದ್ದಾರೆ. ಡಾ. ಜಿ.ಬಿ. ವಿಸಾಜಿ ಅವರು ಬೀದರ ಜಿಲ್ಲೆಗೆ ಐತಿಹಾಸಿಕವಾಗಿ ಮುಖ್ಯವಾದ ಪ್ರಥಮ ಕಥಾ ಸಂಕಲನವನ್ನು ನೀಡಿದ್ದಾರೆ. ಮುಂದೆ ಅವರು ಕಥಾಕ್ಷೇತ್ರದಲ್ಲಿ ಗಂಭೀರವಾದ ಪ್ರಯತ್ನವನ್ನು ಮಾಡಲಿಲ್ಲ.

ಈ ಕಥಾಸಂಕಲನದ ನಂತರ ಅವರ ಕೆಲವು ಕಥೆಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. "ಕಂಬನಿ" ಶಾಂತಿಕಿರಣ ಪತ್ರಿಕೆಯಲ್ಲಿ "ಆ ಮುಖ ಈ ಮುಖ" ಉದಯ ಪತ್ರಿಕೆಯಲ್ಲಿ "ಹಸಿವು" ಗ್ರಿನೋಬಲ್ಸ ಪತ್ರಿಕೆಯಲ್ಲಿ "ನಲ್ಲಿಯನೀರು" ಉದಯ ಪತ್ರಿಕೆಯಲ್ಲಿ ಪ್ರಕಟವಾಗಿವೆ "ಹಿಂದು ಮುಸ್ಲಿಂ" ಸಣ್ಣಕಥೆಯು ಅಪ್ರಕಟಿತವಾಗಿದೆ.

ಅವರು ಕೆಲವು ಮಿನಿಕಥೆಗಳನ್ನು ಬರೆದು ಖಡ್ಕೆ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ೧) ಸಾಹಸ ೨) ಪಾಠ ೩) ಸುದೈವಿ ೪) ಆದದ್ದು ಆಗಿಹೋಯ್ತು ೫) ಶಾಶ್ವತ ಪ್ರೇಮ ಡಾ. ಜಿ.ಬಿ. ವಿಸಾಜಿ ಅವರಿಗೆ ಸಣ್ಣ ಕಥೆಗಳ ಬರಹದಲ್ಲಿ ಬಹಳ ಅಭಿರುಚಿ ಇದ್ದುದ್ದನ್ನು ಕಾಣತ್ತೇವೆ. ಕಥಾ ಪ್ರಕಾರದಲ್ಲಿ ತಮ್ಮ ಸುತ್ತ ಮುತ್ತಲಿನ ವಾಸ್ತವಿಕ ಜೀವನ ಬಹಿರಂಗವಾಗುವುದನ್ನು ಕಂಡು ಚಾಡಿಕೋರ ಎದುರಾಳಿಗಳಿಗೆ ಹೆದರಿ ಕಥೆಗಳನ್ನು ಬರೆಯುವುದನ್ನು ಬಿಟ್ಟು ಅವರು ಬೇರೆ ಸಾಹಿತ್ಯ ಪ್ರಕಾರಗಳ ಕಡೆಗೆ ತಿರುಗಿದಂತಿದೆ.

**೨) ಕವನ ಸಂಕಲನಗಳು :**

**'ಕವ್ಯ'** ಅಂದರೆ ವರ್ಣಿಸು ಮನದಲ್ಲಿ ಮೂಡಿಬಂದ ಭಾವನೆಗಳನ್ನು ಸುಂದರವಾದ ಶಬ್ದಗಳಲ್ಲಿ ವರ್ಣಿಸುವ ರಚಿಸುವ ಕರ್ಮ ಕೌಶಲ್ಯವೇ ಕಾವ್ಯವಾಗಿದೆ. ಇದರ ರಚನಾಕಾರನೆ ಕವಿ. ಕವಿಯ ಭಾವನೆಗಳು ವಾಸ್ತವಿಕ ಜಗತ್ತಿನ ಸತ್ಯಸಂಗತಿಗಳಾಗಿರಬಹುದು. ಇಲ್ಲವೇ ಕಾಲ್ಪನಿಕವಾಗಿರಬಹುದು.

"ಆಧುನಿಕ ಕನ್ನಡ ಕಾವ್ಯದ ಎಲ್ಲಾ ಘಟ್ಟಗಳಲ್ಲಿಯೂ ಜಾನಪದ ನಂಟು ಇರುವುದನ್ನು ನೆನಪಿಡಬೇಕಾದ ಅಂಶ. ಬೇಂದ್ರೆ, ಕಂಬಾರ, ಚನ್ನಣ್ಣ ವಾಲೀಕಾರ ಮೊದಲಾದವರ ಕವನಗಳಲ್ಲಿ ಇದು ಸ್ಪಷ್ಟವಾಗುತ್ತದೆ. ಇತರ ಕಡೆಗಳಲ್ಲಿ ಅದು ಗುಪ್ತಗಾಮಿನಿ ಬದುಕಿನ ಅನುಭವಗಳನ್ನು ತೋಡಿಕೊಳ್ಳುವಾಗ ವಸ್ತುವಿನ ವಿಷಯದಲ್ಲಾಗಲಿ, ಭಾಷೆಯ ವಿಷಯದಲ್ಲಾಗಲಿ ಅತೀ ಸಂಕೋಚವನ್ನಿಟ್ಟುಕೊಳ್ಳದೆ ವ್ಯಕ್ತಿ ಜೀವನವನ್ನು ಒಟ್ಟು ಜೀವನದ ಸಂದರ್ಭದಲ್ಲಿ ಚಿಂತನೆ ಅಂಶ ಅಡಗಿಸಿಕೊಂಡಿರುತ್ತದೆ."[೨]

ಡಾ.ಜಿ.ಬಿ. ವಿಸಾಜಿ ಅವರು ವಿದ್ಯಾರ್ಥಿ ಜೀವನದಲ್ಲಿಯೇ ಸೃಜನಶೀಲ ಸಾಹಿತ್ಯ ರಚನೆಗೆ ತೊಡಗಿದ್ದಾರೆ. ಬೀದರ ಜಿಲ್ಲೆಯ ಮೊದಲ ಕನ್ನಡ ಬರಹಗಾರರ ಮುಂಚೂಣಿಯಲ್ಲಿ ಇವರಿದ್ದಾರೆ. ಇವರ ಮೊದಲ ಕವನ ಸಂಕಲನ "ಮುಂಜಾವು" (೧೯೭೫) ರಚಿತವಾಗಿವೆ. ಇದರಲ್ಲಿ ೩೨ ಕವನಗಳು ಸೇರಿಸಲ್ಪಟ್ಟಿವೆ. ಸಾಂಕೇತಿಕವಾಗಿ ತಮ್ಮ ಸಂಕಲನದೊಂದಿಗೆ ಬೀದರ ಜಿಲ್ಲೆಯ ಕನ್ನಡ ಸಾಹಿತ್ಯದ ಬೆಳವಣಿಗೆಗೂ 'ಮುಂಜಾವು' ಮೂಡಿರುವುದನ್ನು ಸೂಚಿಸಿದ್ದಾರೆ. ವಿಸಾಜಿ ಅವರ ತಾಯಿಯ ಹೆಸರು ಶಿವಗಂಗಾ ಆದ್ದರಿಂದ ತಮ್ಮ ಕಾವ್ಯನಾಮವನ್ನು "ಶಿವಗಾಂಗೇಯ" ಎಂದು

ಇಟ್ಟುಕೊಂಡಿದ್ದಾರೆ. ಅವರ ಬಹುಪಾಲು ಕವನಗಳಲ್ಲಿ ಬೀದರ ಜಿಲ್ಲೆಯ "ನೆಲದ ಮಣ್ಣಿನ ಸತ್ವವನ್ನು ಕಾಣುತ್ತೇವೆ. ಈ ಸಂಕಲನದ ಕವನಗಳು ಸಮರ್ಥವಾಗಿ ಭಾವನೆಯನ್ನು ಅಭಿವ್ಯಕ್ತಿಗೊಳಿಸಿವೆ."[೩] ಎಂದು ಈ ಸಂಕಲನದ ಬೆನ್ನುಡಿಯಲ್ಲಿ ಕೆ.ಜಿ. ಮಾಶೆಟ್ಟಿ ನುಡಿದಿದ್ದಾರೆ. ಅವರು ಮುಂದುವರೆದು ಪ್ರೊ. ವಿಸಾಜಿ ಅವರು ಬೀದರ ಜಿಲ್ಲೆಯ ಸಾಹಿತ್ಯ ರಂಗದಲ್ಲಿ ಮುಂಜಾವಿನ ಹರಿಕಾರರಾಗಿದ್ದಾರೆ ಎಂದಿದ್ದಾರೆ.

ಈ ಸಂಕಲನದ ಬಹಳಷ್ಟು ಕವನಗಳು "ವಿಶ್ವಕಲ್ಯಾಣ", "ನವಕಲ್ಯಾಣ", ಕಲ್ಯಾಣಕಿರಣ", "ಪ್ರಜಾಜ್ಯೋತಿ", "ಶಾಂತಿಕಿರಣ", ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ.

ಡಾ. ಜಿ.ಬಿ. ವಿಸಾಜಿ ಅವರ ಎರಡನೇ ಕವನ ಸಂಕಲನವಾದ "ಮುಂಜಾವಿನಿಂದ ಮುಸ್ಸಂಜೆಯವರೆಗೆ (೨೦೦೦) ಪ್ರಕಟವಾಗಿದೆ. ಇದರಲ್ಲಿ ೬೧ ಕವನಗಳಿವೆ. ಈ ಸಂಕಲನಕ್ಕೆ ಬೀದರ ಜಿಲ್ಲೆಯ ಹಿರಿಯ ಸಾಹಿತಿಗಳಾದ ವೀರೇಂದ್ರ ಸಿಂಪಿ ಅವರು ಮುನ್ನುಡಿ ಬರೆದಿದ್ದಾರೆ. "ಡಾ. ಜಿ.ಬಿ. ವಿಸಾಜಿ ಬೀದರ ಜಿಲ್ಲೆಯ ಹೆಮ್ಮೆಯ ಹಿರಿಯ ಕವಿಗಳಾಗಿದ್ದಂತೆ ಕರ್ನಾಟಕದ ಹೆಮ್ಮೆಯ ಕವಿಗಳಾಗಿದ್ದಾರೆ. ಅವರು ಬೀದರ ಜಿಲ್ಲೆಯಲ್ಲಿ ಸಾಹಿತ್ಯ ಕೃಷಿ ಮಾಡುವ ಒಂದು ತಂಡವನ್ನು ನಿರ್ಮಿಸಿದ್ದಾರೆ. ಈ ನಿಟ್ಟಿನಲ್ಲಿ ಅವರು ಕವಿಗಳ ಕವಿಗಳಾಗಿದ್ದಾರೆ."[೪] ಡಾ. ಜಿ.ಬಿ. ವಿಸಾಜಿ ಅವರು ನಾಡು ನುಡಿಯ ಉತ್ಕಟ ಅಭಿಮಾನಿ, ರಸಿಕ, ಕುಟುಂಬ ಪ್ರೇಮಿ, ಬಸವತತ್ವಾನುಯಾಯಿ, ಹಾಗೂ ಚಿಂತನಶೀಲ ಕವಿಗಳಾಗಿದ್ದಾರೆ. ಅವರು ಸಮಕಾಲೀನ ಸಮಯದ ಆಗುಹೋಗುಗಳಿಗೆ ತೀವ್ರವಾಗಿ ಸ್ಪಂದಿಸಿದ್ದಾರೆ. ವಿಸಾಜಿ ಅವರು ವ್ಯಕ್ತಿಗಳನ್ನು ಕುರಿತ ಕವನಗಳು ಓದುಗರಿಗೆ ಆ ವ್ಯಕ್ತಿಗಳನ್ನು ಕಣ್ಮುಂದೆ ಕಾಣುವಂತೆ ಚಿತ್ರಿಸಿದ್ದಾರೆ. ಅವರ ಕನ್ನಡಾಭಿಮಾನ ಕಾವ್ಯವಾಗಿ ಹರಿದು ಕನ್ನಡಿಗರ ಕಿವಿಗಳಲ್ಲಿ ಯಾವಾಗಲು ಮೊಳಗುತ್ತದೆ.

"ಹಕ್ಕಿಗಳುಲಿಯಲು ಗಾಳಿಯು ಬಿಸಲು
ಕನ್ನಡಮಾತೆಯ ಸವಿಸೊಲ್ಲು
ಜೋಗದ ಧಭೆ ಧಭೆ ನದಿಗಳ ಕಲಕಲ
ಕನ್ನಡ ತಾಯಿಯ ಎದೆಹಾಲು

ಕನ್ನಡ ಮಕರಂದಕ್ಕೆ ಮನಸೋತು
ಹಾಡಿವೆ ತುಂಬಿ ಎದೆದುಂಬಿ
ಕನ್ನಡ ಮೈಸಿರಿ ನೋಡಲು ಎಂದು
ನೆರದಿವೆ ತಾರೆ ನಭತುಂಬಿ"[೫]

ಜಿ.ಬಿ. ವಿಸಾಜಿ ಅವರು ತನ್ನ ಜಿಲ್ಲೆ, ನಾಡು, ನುಡಿ, ದೇಶದ ಬಗ್ಗೆ ತುಂಬ ಸ್ವಾಭಿಮಾನವುಳ್ಳ ಕವಿಯಾಗಿದ್ದಾರೆ. ಅವರು "ಬೀದರದ ಚೆಣ್ಣನಿಗೆ" ಕವಿತೆಯಲ್ಲಿ

"ನೆಲದಾಳದಿ ಬೇರು ಬಿಟ್ಟು
ಮರವಾಗಿ ಗಗನ ಮುಟ್ಟು
ವಿಶ್ವವನೇ ತಬ್ಬುತೆಕ್ಕೆಯಾಳು
ನೀ ಬೆಳೆದಂತೆ ನೆಲದ ನುಡಿಯೊಳು ಹಾಡು"[೬]

ಎಂದು ಬೋಧಿಸಿದ್ದಾರೆಂದು ಡಾ. ವೈಜಿನಾಥ ಭಂಡೆ ತಿಳಿಸಿದ್ದಾರೆ. ಕವಿ ಗಾಂಧೀಜಿಯನ್ನು "ವಿಶ್ವದೀಪ" ಎಂದು ಕರೆಯುತ್ತಾರೆ.

"ವಿಶ್ವಬಾಳಿನ ದೀಪ
ಸತ್ಯ ಅಹಿಂಸೆ ಧೂಪ
ಕೊಂದವಗೂ ಕೈಮುಗಿದು ನಡೆದ ಭೂಪ"[೭]

ಗಾಂಧಿಯ ಸತ್ಯ ಅಹಿಂಸೆಗಳು ವಿಶ್ವಕ್ಕೆ ನೀಡಿದ ನೀತಿಯ ಮೌಲ್ಯಗಳಾಗಿವೆ. ಮೇಲಿನ ಸಾಲುಗಳು ವಿಸಾಜಿ ಅವರೊಳಗಿನ ಕವಿಯನ್ನು ಸಾಬಿತುಪಡಿಸಿವೆ. ಎಂದು ಪ್ರೊ. ಶ್ರೀಶೈಲ ನಾಗರಾಳ ನುಡಿದಿದ್ದಾರೆ. ವಿಸಾಜಿ ಅವರ "ಆರು ತಿಂಗಳ ಬಸುರಿ"[೮] ಕವನವು ಕನ್ನಡ ಪ್ರೇಮ ಕವನಗಳಲ್ಲಿಯೇ ಅಪೂರ್ವವಾಗಿದೆ."

"ಬಾಲಸಿಂದಿಗಿಡದ ಬದಿಕುಳಿತ ನಾರಿ
ಬೈತಲೆ ತೆಗೆದಾಳ ವಾರಿ
ನಗುನಗುತಾ ನನ್ನ ನೋಡತಾಳ
ನನ್ನ ಬಿಟ್ಟು ಜಗ ಮರತಾಳ"

ಎಂಬಲ್ಲಿ ಧ್ವನ್ಯಾರ್ಥವನ್ನು ಹೊಂದಿ ಅಪೂರ್ವವಾಗಿದೆ ಎಂದು ಡಾ. ಜಿ. ಕೃಷ್ಣಪ್ಪ ತಿಳಿಸಿದ್ದಾರೆ.

"ಬದುಕು" ಕವಿತೆ ಕರುವಿನ ಬೆಳವಣಿಗೆಯನ್ನು ವಿವರಿಸುತ್ತಲೆ ಬದುಕಿನ ಅವಸ್ಥೆಗಳನ್ನು ಚಿತ್ರಿಸಿದೆ.

"ಮನೆಯಿಂದ ಬಿಟ್ಟರೆ ಸೀದಾ ಹೊಲಕ್ಕೆ
ಹೊಲದಿಂದ ನೆರ ಮನೆಗೆ
ತನ್ನ ಗೂಟದ ಹತ್ತಿರವೇ ನಿಲ್ಲುವ
ತನ್ನ ಮೇವಿಗೆ ಮಾತ್ರ ಬಾಯೊಡ್ಡುವ
ನೊಣ ಕೂತರೂ ಜಾಡಿಸಿಕೊಳ್ಳದ
ಕಾಗೆ ಕಡಿದರೂ
ಸುಮ್ಮನಿರುವ ಎತ್ತು"[೯]

ಈ ಸಾಲುಗಳು ಬದುಕಿನ ಮುಪ್ಪನ್ನು ಹೇಳುವ ರೀತಿ ಅರ್ಥಪೂರ್ಣವಾದದ್ದು ಎಂದು ಡಾ. ವಿಕ್ರಮ ವಿಸಾಜಿ ತಿಳಿಸಿದ್ದಾರೆ. ವಿಸಾಜಿ ಅವರ ಕವನಗಳನ್ನು ಗಮನಿಸಿದ ಪ್ರೊ. ವೀರೇಂದ್ರ ಸಿಂಪಿ ಅವರು "ಕವಿ ಇತ್ತೀಚಿನ ಕವನಗಳಲ್ಲಿ ಹೆಚ್ಚು ಚಿಂತನಶೀಲರಾಗಿ ಬಾಳಿನ ಬಗ್ಗೆ ದೇಶದ ಸ್ಥಿತಿಗತಿಯ ಬಗ್ಗೆ ಪ್ರಶ್ನೆ ಮಾಡುತ್ತಿದ್ದಾರೆ. ಅವರ ಕಾವ್ಯ ಇನ್ನಷ್ಟು ತೀಕ್ಷ್ಣವಾಗಿ ಚಿಂತನಶೀಲತೆಯನ್ನು ಸಮಕಾಲೀನ ಸಮಾಜದ ಕಷ್ಟಗಳ ದುರಂತಗಳ ಚಿತ್ರಣವನ್ನು ಒದಗಿಸಬಹುದೆಂದು ತಿಳಿಸಿದ್ದಾರೆ. ಡಾ. ವಿಕ್ರಮ ವಿಸಾಜಿ ಅವರು "ಮಾನವೀಯತೆಯ ಒಡಲಲ್ಲಿ ಅರಳುವ ಡಾ. ಜಿ.ಬಿ. ವಿಸಾಜಿಅವರ ಕಾವ್ಯ ಮನುಷ್ಯನ ಎಲ್ಲಾ ರೀತಿಯ ಕ್ರೌರ್ಯಗಳ ನಡುವೆಯು ಮಾನವೀಯತೆಯನ್ನು ಉಳಿಸಿಕೊಳ್ಳುವೆಡೆಗೆ ದುಡಿಯುತ್ತದೆ. ಈ ಮಾನವೀಯತೆಯೊಂದಿಗೆ ಸಮಕಾಲೀನತೆ ಸಹ ಇಲ್ಲಿನ ಕಾವ್ಯ ಕ್ರಿಯೆಯಲ್ಲಿ ತೀವ್ರವಾಗಿ ಕೆಲಸಮಾಡಿದೆ. ಎಂದು ತಿಳಿಸಿದ್ದಾರೆ.

ಇವರ ಮೆಚ್ಚಿನ ವಿದ್ಯಾರ್ಥಿ ಭರತ ಬಿರಾದಾರ ಅವರು ತಮ್ಮ ಕಾವ್ಯನಾಮವನ್ನು "ಶಿವಗಾಂಗೇಯ ಪ್ರಿಯ ಭರತ" ಎಂದು ಇಟ್ಟುಕೊಂಡು ಕಾವ್ಯದ ಮೇಲಿನ ಪ್ರೀತಿಯನ್ನು ಮತ್ತು ಗುರುಗಳ ಮೇಲಿರುವ ಪ್ರೀತಿಯನ್ನು ಏಕಕಾಲದಲ್ಲಿ ವ್ಯಕ್ತಪಡಿಸಿದ್ದಾರೆ. ಇತ್ತೀಚಿಗೆ ವಿಸಾಜಿ ಅವರು "ಚನ್ನಬಸವಪ್ರಿಯ ಗುರುಲಿಂಗ" ಎಂಬ ಅಂಕಿತನಾಮವನ್ನು ಇಟ್ಟುಕೊಂಡು ಆಧುನಿಕ ವಚನಗಳನ್ನು ಬರೆಯುತ್ತಿದ್ದಾರೆ.

**ಸಂತ**

"ಶಬ್ದಗಳನ್ನು ಪ್ರೀತಿಸದವನು ಕವಿಯಾಗಲಾರ
ಮಾನವೀಯತೆ ಇಲ್ಲದವನು ಮನುಷ್ಯನಾಗಲಾರ
ಜನತೆಯನ್ನು ಪ್ರೀತಿಸದವನು ನಾಯಕನಾಗಲಾರ
ಸ್ವರ ಸಾಧನೆಯಿಲ್ಲದವನು ಗಾಯಕನಾಗಲಾರ
ನಿರ್ಲಿಪ್ತತೆ ಇಲ್ಲದವನು ಸಂತನಾಗಲಾರ
ಚನ್ನಬಸವಪ್ರಿಯ ಗುರುಲಿಂಗ"

**೩) ಪ್ರಬಂಧ ಸಂಕಲನಗಳು :**

ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದಲೇ ಈ ಗದ್ಯ ಸಾಹಿತ್ಯ ರೂಪದ ವಿಕಾಸ ನಮ್ಮ ಆಧುನಿಕ ಸಾಹಿತ್ಯದಲ್ಲಾಗಿದೆ. ಇಂಗ್ಲೀಷ್ ಸಾಹಿತ್ಯದಲ್ಲಿ ಬೆಳೆದು ಬಂದ 'ಎಸ್ಸೆ' ಎಂಬುವುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಪ್ರಬಂಧ ಮತ್ತು ನಿಬಂಧ ಎಂದು ಎರಡು ಪದಗಳು ಬಳಕೆಯಲ್ಲಿವೆ. ಇವುಗಳ ಶಾಬ್ದಿಕ ಅರ್ಥ ಒಂದೇ ಆಗಿದ್ದರೂ ಬಳಕೆಯಲ್ಲಿಯೇ ಅವು ವಿಶೇಷ ಅರ್ಥವನ್ನು ಪಡೆದಿವೆ.

ಪ್ರಬಂಧ ಸಾಹಿತ್ಯದ ಜನಕನೆಂದು ಖ್ಯಾತಿ ಪಡೆದಿರುವ ಫ್ರೆಂಚ್ ಸಾಹಿತಿ ಮಾಂಟೆನ್‌ರಾಗಿದ್ದಾರೆ.

ಸಾಹಿತ್ಯ ಪ್ರಕಾರಗಳಲ್ಲಿ ಪ್ರಬಂಧ ಪ್ರಕಾರವು ಕೂಡ ಒಂದಾಗಿದೆ. ಡಾ.ಜಿ.ಬಿ. ವಿಸಾಜಿ ಅವರು ಪ್ರಬಂಧ ಪ್ರಕಾರದಲ್ಲಿಯು ಕೃಷಿ ಮಾಡಿದ್ದಾರೆ. "ಸಾಹಿತ್ಯಾಲೋಕನ" (೧೯೭೫) ಅವರ ಪ್ರಥಮ ಪ್ರಬಂಧ ಸಂಕಲನವಾಗಿದೆ ಈ ಸಂಕಲನವನ್ನು ಅವರು ತಮ್ಮ ಪ್ರೀತಿಯ ಅಜ್ಜಿ ಅಂಬವ್ವ ಅವರಿಗೆ ಅರ್ಪಿಸಿದ್ದಾರೆ. ಈ ಸಂಕಲನಕ್ಕೆ ಡಾ. ಮಲ್ಲಿಕಾರ್ಜುನ ಲಠ್ಠೆ ಅವರು ಮುನ್ನುಡಿಯನ್ನು ಬರೆದಿದ್ದಾರೆ. ಇದರಲ್ಲಿ ಏಳು ಪ್ರಬಂಧಗಳಿವೆ.

೧. ಬಸವಣ್ಣನ ವಚನಗಳಲ್ಲಿ ಸತಿಯ ಸ್ವರೂಪ
೨. ಚನ್ನಮಲ್ಲಿಕಾರ್ಜುನನ ಗೃಹಿಣಿ ಮಹಾದೇವಿ ಅಕ್ಕ
೩. ಕಲೆ ಮತ್ತು ಜೀವನ
೪. ಭಾವಗೀತೆ
೫. ಕಲ್ಯಾಣ ಚಾಲುಕ್ಯರಲ್ಲಿದ್ದ ಕನ್ನಡ ಕವಿಗಳು
೬. ಪಂಪ ಹಾಗೂ ಅಭಿನವ ಪಂಪರ ಯುದ್ಧ ವರ್ಣನೆ
೭. ಸಿದ್ಧರಾಮನ ವಚನಗಳಲ್ಲಿ ಹಿತನುಡಿಗಳು

"ಈ ಸಂಕಲನ ಸರ್ವ ಸಾಮನ್ಯರಿಗೂ ತಿಳಿಯುವಂತೆ ಸರಳ ಶೈಲಿಯಲ್ಲಿ ಮೈದಾಳಿದೆ. ತೂಕ ತಪ್ಪದ ಅವರ ವಿಚಾರ ಸರಣಿ ಹರಿತವು ಆಳವು ಆದ ಭಾಷೆಯಲ್ಲಿ ಗರಿಗೆದರಿದೆ."[೧೦] ಎಂದು ಡಾ. ಮಲ್ಲಿಕಾರ್ಜುನ ಲಠ್ಠೆ ಅವರು ಹೇಳಿದ್ದಾರೆ. "ಈ ಸಂಕಲನವು ವಿಸಾಜಿ ಅವರಿಗೆ ಕನ್ನಡದಲ್ಲಿರುವ ಪಾಂಡಿತ್ಯ, ಸಹೃದಯತೆ, ವಿಮರ್ಶಾ ಶಕ್ತಿ, ಚಿಂತನಶೀಲ ಹಾಗೂ ಆಧ್ಯಾತ್ಮಿಕ ಪ್ರವೃತ್ತಿಯನ್ನು ಎತ್ತಿ ತೋರಿಸುತ್ತದೆ."[೧೧] ಎಂದು ವ್ಹಿ.ಜಿ. ಭಂಡೆ ಹೇಳಿದ್ದಾರೆ.

ಇವರ ಎರಡನೆ ಪ್ರಬಂಧ ಸಂಕಲನ "ಭಾವಬಿಂಬ" (೧೯೭೮) ಪ್ರಕಟವಾಗಿದೆ. ಇದರಲ್ಲಿ ೧೬ ಪ್ರಬಂಧಗಳಿವೆ. ಈ ಪ್ರಬಂಧಗಳು "ಜ್ಞಾನಜ್ಯೋತಿ" "ಅಭಿರುಚಿ", "ಶಾಂತಿಕಿರಣ", ಮೈತ್ರಿ", ಮತ್ತು "ನೆಲದನುಡಿ" ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇಲ್ಲಿಯ ವ್ಯಕ್ತಿ ಚಿತ್ರ ಪ್ರಬಂಧಗಳನ್ನು ಕುರಿತು ವೇಣುಗೋಪಾಲ ಸೋರಬ ಅವರು "ಬೀದರ ಜಿಲ್ಲೆಯ ಕೆಲವು ಮರೆಯಲಾಗದ ವ್ಯಕ್ತಿಗಳನ್ನು ಪರಿಚಯಿಸುವ ಲೇಖನಗಳು ವಿಸಾಜಿ ಅವರಿಗಿರುವ ಸಾಮರ್ಥ್ಯವನ್ನು ಎತ್ತಿ ತೋರಿಸುತ್ತದೆ" ಎಂದು ಮಲ್ಲಿಗೆ ಪತ್ರಿಕೆಯಲ್ಲಿ "೧೯೭೮" ಹೇಳಿದ್ದಾರೆ.

ಕೆರಳ್ಳಿ ಗುರುನಾಥ ರೆಡ್ಡಿ ಅವರ ಭಾವಬಿಂಬದಲ್ಲಿಯ "ನಾಲ್ಕು ವ್ಯಕ್ತಿ ಚಿತ್ರದ ಲೇಖನಗಳು ತುಂಬ ಚೆನ್ನಾಗಿ ಮೂಡಿಬಂದಿವೆ. ಮನಸ್ಸು ಸೆರೆಹಿಡಿಯುತ್ತವೆ. ವಿಮರ್ಶಾ ಪ್ರಬಂಧಗಳು

ಸಫಲತೆಯನ್ನು ಪಡೆದಿವೆ''[೧೨] ಎಂದಿದ್ದಾರೆ. ಇದರಲ್ಲಿನ ಲೇಖನಗಳು ವೈವಿಧ್ಯಮಯವಾಗಿವೆ. ಇವುಗಳನ್ನು ಓದಿದಾಗ ಡಾ. ಜಿ.ಬಿ.ವಿಸಾಜಿ ಅವರು ವಿದ್ವಾಂಸರು, ಪ್ರಗತಿಪರ ಚಿಂತಕರು, ಹಳೆಗನ್ನಡ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯ ಎರಡನ್ನು ಆಳವಾಗಿ ಅಭ್ಯಾಸ ಮಾಡಿರುವುದಾಗಿ ಗೊತ್ತಾಗುತ್ತದೆ.

ಚಿಂತನ ದೀಪಿಕೆ (೧೯೯೦) ಇವರು ಗುಲಬರ್ಗಾ ಆಕಾಶವಾಣಿಯ ಚಿಂತನ ಕಾರ್ಯಕ್ರಮಕ್ಕಾಗಿ ಬರೆದ ಕಿರು ಪ್ರಬಂಧಗಳ ಸಂಕಲನವಾಗಿದೆ. ಇದರಲ್ಲಿ ೩೬ ರೇಡಿಯೋ ಚಿಂತನಗಳಿವೆ. ಪ್ರೊ. ವಸಂತ ಕುಷ್ಟಗಿ ಅವರು ವಿಸಾಜಿ ಅವರ ಚಿಂತನ ಕೇಳಿ ''ವಿಚಾರದಲ್ಲಿದ್ದ ಕಾವು, ಲೋಕದ ಬಗ್ಗೆ ಇದ್ದ ಕಳವಳಿ, ಆಧ್ಯಾತ್ಮಿಕ ತೀವ್ರತೆ, ವಿವೇಕಗಳಿಂದ ಅವು ಸುಂದರವಾಗಿವೆ. ಬಳಸಿದ ಶಬ್ದ ಚಿತ್ರಗಳಲ್ಲಿ ಜೀವಂತಿಕೆ ಇದೆ ನಿಜಕ್ಕೂ ನಾನು ಮೆಚ್ಚಿಕೊಂಡಿದ್ದೇನೆ''[೧೩] ಎಂದು ಬರೆದಿದ್ದಾರೆ.

ಪ್ರಸ್ತುತ ಚಿಂತನ ದೀಪಿಕೆ ಕುರಿತು ಡಾ. ಹಾ.ಮಾ. ನಾಯಕರು ''ಚಿಂತನ ದೀಪಿಕೆಯನ್ನು ಕುತೂಹಲದಿಂದ ಓದಿದ್ದೇನೆ. ಬದುಕಿಗೆ ಅಗತ್ಯವಾದ ಕೆಲವು ಮೌಲ್ಯಗಳನ್ನು ನೀವು ಸಮರ್ಥವಾಗಿ ಪ್ರತಿಪಾದಿಸಿದ್ದೀರಿ ಈ ಪ್ರಬಂಧಗಳಲ್ಲಿ ನಿಮ್ಮ ಅನುಭವ, ಅಧ್ಯಯನಗಳು ನಿಚ್ಚಳವಾಗಿ ಕಾಣಿಸಿಕೊಂಡಿವೆ''[೧೪] ಎಂದು ಹೇಳಿದ್ದಾರೆ.

''ಬಸಿರಿರುವಾಗ ಒಳ್ಳೆಯ ಪುಸ್ತಕಗಳನ್ನು ಓದಬೇಕೆಂದು ಹಿರಿಯರು ಹೇಳುತ್ತಾರೆ. ಅದಕ್ಕೆ ಈ ಪುಸ್ತಕ ''ಚಿಂತನ ದೀಪಿಕೆ''ಯನ್ನು ಓದುತ್ತಿದ್ದೇನೆ ಎಂದು ನನ್ನ ಗೆಳತಿ ತಿಳಿಸಿದಳೆಂದು''[೧೫] ಡಾ. ಪ್ರಕೃತಿ ವಿಸಾಜಿ ಹೇಳುತ್ತಾರೆ. ಹಿರಿಯ ಸಾಹಿತಿ ಶ್ರೀ ಶಾಂತಪ್ಪ ದೇವರಾಯ ಅವರು ''ಡಾ. ಜಿ.ಬಿ.ವಿಸಾಜಿ ಅವರ ಚಿಂತನಗಳು ಅವರ ವಿದ್ಯಾರ್ಥಿ ಜೀವನದಿಂದ ಇಲ್ಲಿಯವರೆಗಿನ ಸಾಹಿತ್ಯ ಮಂಥನದಲ್ಲಿ ಹುಟ್ಟಿ ಬಂದ ನವನೀತದಂತಿವೆ. ಈ ಚಿಂತನಗಳಲ್ಲಿ ತೆಗೆದೆಸೆಯಬೇಕಾದ ವಾಕ್ಯಗಳು ವಿರಳ''[೧೬] ಎಂದಿದ್ದಾರೆ.

ಕಿರು ಪ್ರಬಂಧಗಳ ರಚನೆಯಲ್ಲಿ ಡಾ.ಜಿ.ಬಿ.ವಿಸಾಜಿ ಅವರದ್ದು ಎತ್ತಿದ ಕೈಯಾಗಿದೆ.

ಡಾ.ಜಿ.ಬಿ. ವಿಸಾಜಿ ಅವರ ನಾಲ್ಕನೇಯ ಪ್ರಬಂಧ ಸಂಕಲನ ''ಬೆಳಕಿನೆಡೆಗೆ'' (೨೦೦೨) ಪ್ರಕಟವಾಗಿದೆ. ಇದರಲ್ಲಿ ೩೧ ಕಿರು ಪ್ರಬಂಧಗಳಿವೆ. ಈ ಸಂಕಲನವನ್ನು ಅವರ ತಂದೆ ಶ್ರೀ ಭೀಮರಾವ ವಿಸಾಜಿ ಅವರಿಗೆ ಅರ್ಪಿಸಲಾಗಿದೆ. ಇವರ ಮೂರು ಚಿಂತನಗಳನ್ನು ಹೀಗಿವೆ

೧. ಮಕ್ಕಳು ಏನಾಗಬೇಕು
೨. ಅಭ್ಯಾಸದಿಂದ ಆನಂದ

೩. ಸಾರ್ವಜನಿಕ ಗಣೇಶ ಉತ್ಸವ ಮೌಲ್ಯ ಕಳೆದುಕೊಳ್ಳುತ್ತಿದೆ. ಇವುಗಳನ್ನು ಗುಲಬರ್ಗಾ ವಿಶ್ವವಿದ್ಯಾಲಯದ ಬೆಳ್ಳಿ ಬೆಳಕು ಮಾಲೆ ಪ್ರಾತಿನಿಧಿಕ ಸಂಕಲನ "ಚಿಂತನ ಲೆಖನಗಳು" ಪುಸ್ತಕದಲ್ಲಿ ಸೇರ್ಪಡೆ ಮಾಡಲಾಗಿದೆ. ಇವರ ಚಿಂತನ ಲೇಖನಗಳು ಉಪಯುಕ್ತವಾಗಿವೆ. ಗಾಢ ಪರಿಣಾಮ ಬೀರುತ್ತವೆ. ಜನಸಾಮನ್ಯರ ಜ್ಞಾನ ವಿಸ್ತರಿಸುತ್ತವೆ. ಮತ್ತು ಸಂಗ್ರಹ ಯೋಗ್ಯವಾಗಿವೆ.

ಡಾ. ಜಿ.ಬಿ.ವಿಸಾಜಿ ಅವರ ಪ್ರಕಟವಾದ ಐದನೆ ಪ್ರಬಂಧ ಸಂಕಲನ "ಸಾಲುದೀಪ" (೨೦೦೪) ಜನಪ್ರಿಯವಾದುದ್ದಾಗಿದೆ. ಇದರಲ್ಲಿ ೪೧ ಪ್ರಬಂಧಗಳನ್ನು ಪ್ರಕಟಿಸಲಾಗಿದೆ. ಈ ಗ್ರಂಥವನ್ನು ಕಲಾನಿಕೇತನ ಪ್ರಕಾಶನ ಬಸವಕಲ್ಯಾಣದಿಂದ ಪ್ರಕಟಿಸಲಾಗಿದೆ. ಈ ಗ್ರಂಥವನ್ನು ತಮ್ಮ ಹಿರಿಯ ಮಗ ಚನ್ನಬಸವ ವಿಸಾಜಿ ಅವರಿಗೆ ಅರ್ಪಿಸಿದ್ದಾರೆ. "ಈ ಗ್ರಂಥದಲ್ಲಿ ಸಾರ್ವಜನಿಕರಿಗೆ ಬಡಿದು ಎಚ್ಚರಿಸುವಂತಹ ನೆಲ, ಜಲ, ಕನ್ನಡ ನಾಡು ನುಡಿಯ ಕುರಿತು ಜಾಗೃತಿ ಮೂಡಿಸುವಂತಹ ಎಲ್ಲರಿಗೂ ಮಾರ್ಗದರ್ಶನ ನೀಡುವ ಉಪಯುಕ್ತ ಲೇಖನಗಳು ಇವೆ."[೧೭] ಎಂದು ಶ್ರೀ ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ ಬಸವಕಲ್ಯಾಣ ಪ್ರಾಚಾರ್ಯರಾದ ಪ್ರಭುಲಿಂಗಯ್ಯ ಟಂಕಸಾಲಿಮಠ ಅವರು ತಿಳಿಸಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ಅನೇಕ ಲೇಖಕರಿಗೆ ಮುನ್ನುಡಿಗಳನ್ನು ಬರೆದು ಹಾರೈಸಿದ್ದಾರೆ. ಅವುಗಳನ್ನೆಲ್ಲ ಕೂಡಿಸಿ ಅವಲೋಕನ ಎಂಬ ಹೆಸರಿನಲ್ಲಿ ಒಂದು ಪ್ರಬಂಧ ಸಂಕಲನ ಹೊರ ತರುವುದರಲ್ಲಿದ್ದಾರೆ. ಶರಣ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಅವರು ಬರೆದ ಲೇಖನಗಳ ಸಂಕಲನ "ವಚನಸಂಪದ" ಮುದ್ರಣಗೊಳ್ಳುತ್ತಿದೆ. ಸಂಭಾವನಾ ಗ್ರಂಥದಲ್ಲಿ ಪತ್ರಿಕೆಗಳಲ್ಲಿ ಅಂತರಜಾಲ ಪತ್ರಿಕೆ "ಕೆಂಡ ಸಂಪಿಗೆ"ಯಲ್ಲಿ ಪ್ರಕಟವಾದ ಅನೇಕ ಪ್ರಬಂಧಗಳು ಸಂಕಲನ ರೂಪದಲ್ಲಿ ಇನ್ನೂ ಪ್ರಕಟವಾಗಬೇಕಾಗಿದೆ.

## ೪) ಜೀವನ ಚರಿತ್ರೆಗಳು :

ಜೀವನ ಚರಿತ್ರೆ ಎಂದರೆ "ನಿರ್ದಿಷ್ಟ ವ್ಯಕ್ತಿಗಳ ಬದುಕಿನ ಚರಿತ್ರೆ"[೧೮] ಎಂದು ೧೬೮೩ ರಲ್ಲಿ ಟ್ರೈಡನ ಹೇಳಿದ್ದಾರೆ. ಆಕ್ಸಫರ್ಡ್ ಡಿಕ್ಸನರಿಯಲ್ಲಿ "ವ್ಯಕ್ತಿಗಳ ಬದುಕಿನ ಸಾಹಿತ್ಯಾತ್ಮಕ ಚಾರಿತ್ರಿಕ ಕಥನವೇ ಜೀವನ ಚರಿತ್ರೆ" ಎಂದು ಹೇಳಿದೆ. ಜೀವನ ಚರಿತ್ರೆಯು ಮೂರು ಅವಶ್ಯಕ ಲಕ್ಷಣಗಳನ್ನು ಒಳಗೊಂಡಿರುತ್ತದೆ. ಅವು "ಇತಿಹಾಸ", "ವ್ಯಕ್ತಿ" ಮತ್ತು "ಸಾಹಿತ್ಯ" ಅದು ಸತ್ಯ ನಿಷ್ಠವರದಿಯಾಗಿರಲೇಬೇಕು. ಜೀವನ ಚರಿತ್ರೆಯು ಆ ವ್ಯಕ್ತಿಯ ಬಾಹ್ಯ ಮತ್ತು ಆಂತರಿಕ ಎರಡರ ಸಮಗ್ರತೆಯನ್ನು ಸತ್ಯನಿಷ್ಠೆಯಿಂದ ಚಿತ್ರಿಸುತ್ತದೆ. ಜೀವನ ಚರಿತ್ರೆ ಎಂದರೆ ಪ್ರಶಂಸೆಯು ಅಲ್ಲ. ಭರ್ತ್ಸನೆಯು ಅಲ್ಲ. ಅದು ತಾನು ಆರಿಸಿಕೊಂಡ ವ್ಯಕ್ತಿಯ ಪ್ರಾಮಾಣಿಕ ಚಿತ್ರವಾಗಿರಬೇಕು. ಡಾ.ಜಿ.ಬಿ. ವಿಸಾಜಿ ಅವರು ಜೀವನ ಚರಿತ್ರೆ ಸಾಹಿತ್ಯ ಪ್ರಕಾರದಲ್ಲಿಯು ಹೆಚ್ಚಿನ ಕೃಷಿ ಮಾಡಿದ್ದಾರೆ.

ಉದಗೀರ ಸಂಗ್ರಾಮಪ್ಪನವರು (೧೯೮೬) ಮೊದಲನೆಯ ಜೀವನ ಚರಿತ್ರೆಯಾಗಿದೆ. ಗದುಗಿನ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ವೀರಶೈವ ಅಧ್ಯಯನ ಸಂಸ್ಥೆ ವೀರಶೈವ ಪುಣ್ಯಪುರುಷರ ಪುಸ್ತಕ ಮಾಲೆಯಲ್ಲಿ ಪ್ರಕಟಿಸಿದ ೬೨ನೇ ಪುಸ್ತಕವೇ ಉದಗೀರ ಸಂಗ್ರಾಮಪ್ಪನವರು. ಕಳೆದ ೧೦೦ ವರ್ಷಗಳಲ್ಲಿ ಆಗಿಹೋದ ವೀರಶೈವ ಪುಣ್ಯ ಪುರುಷರ ಚರಿತ್ರೆಯನ್ನು ಓದಿ ವೀರಶೈವ ಧರ್ಮ, ತತ್ವ, ಬೆಳಕು, ಪ್ರಯೋಜನಗಳನ್ನು ಇಂದಿನವರು ಅರಿಯಲಿ ಮುಂದೆ ಸಾಗಲಿ ಎಂಬ ಸದುದ್ದೇಶದಿಂದ ಪ್ರಾರಂಭಿಸಿದ ಯೋಜನೆ ಈ ಪುಸ್ತಕದಿಂದಲೂ ಸಫಲವಾಗಿದೆ ಎಂದು ಹೇಳಬಹುದು.

ಉದಗೀರದ ಒಂದು ವೀರಶೈವದ ಬಡಮನೆತನದಲ್ಲಿ ಜನ್ಮ ತಳೆದು ಸ್ವಯಂಸ್ಫೂರ್ತಿಯಿಂದ ಓದಿ, ಕಷ್ಟಪಟ್ಟು ಮುಂದೆ ಬಂದು ವಕೀಲರಾಗಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ವೀರಶೈವಕ್ಕೆ ಒಂದು ಗಟ್ಟಿ ನೆಲೆಯನ್ನು ಬಲವನ್ನು ತಂದು ಕೊಟ್ಟವರು ಶ್ರೀ ಸಂಗ್ರಾಮಪ್ಪನವರು.

ಸಂಗ್ರಾಮಪ್ಪನವರ ಹುಟ್ಟು, ಬಾಲ್ಯ, ಯೌವ್ವನ, ವಿದ್ಯಾಭ್ಯಾಸ, ಉದ್ಯೋಗ, ಸೇವೆ, ಸಾಹಸ, ಪರೋಪಕಾರ, ಧಾರ್ಮಿಕ ಸೇವಾಮನೋಭಾವ, ಹೋರಾಟಗಳನ್ನು ಕಣ್ಣಿಗೆ ಕಟ್ಟುವಂತೆ ಜಿ.ಬಿ. ವಿಸಾಜಿ ಅವರು ಬೀದರದ ಭಾಷೆಯಲ್ಲಿಯೇ ಬರೆದಿದ್ದಾರೆ. ಉದಗೀರದ ಇತಿಹಾಸದೊಂದಿಗೆ ಸಂಗ್ರಾಮಪ್ಪನವರ ವಂಶಚಿತ್ರವನ್ನು ಸಂಗ್ರಹಿಸಿದ್ದಾರೆ. ಸಂಗ್ರಾಮಪ್ಪನವರ ಸಾಹಸವನ್ನು ಮರಾಠಿ ಕವಿಗಳು ಎತ್ತಿತೋರಿಸಿದ್ದಾರೆ. ಅವರು ಮರಣ ಹೊಂದಿದಾಗ ವಿವಿಧ ಜನರಿಂದ ಹರಿದು ಬಂದ ಭಾವನೆಯ ಹೊನಲುಗಳನ್ನು ಸಂಗ್ರಹಿಸಿದ ಬಗೆ ಅಪ್ರತಿಮವಾಗಿದೆ. ಪ್ರತಿವರ್ಷ ಶ್ರಾವಣ ಮಾಸದಲ್ಲಿ ಉದಗೀರ ನಗರದಲ್ಲಿ ನಡೆಯುವ 'ಸಂಗ್ರಾಮ ಡೇ' ಸಮಾರಂಭಕ್ಕೆ ಆಗಮಿಸಿದ ಸಭಾಧ್ಯಕ್ಷರು ಮತ್ತು ಅತಿಥಿಗಳ (೧೯೪೦ ರಿಂದ ೧೯೮೫) ಪಟ್ಟಿಯನ್ನು ಸಂಗ್ರಹಿಸಿದ ವಿಸಾಜಿ ಅವರ ಸೈರಣೆಯನ್ನು ಮೆಚ್ಚಬೇಕು. ಅಲ್ಲದೆ ನಿಜಾಂ ಪ್ರಾಂತದ ವೀರಶೈವ ಪರಿಷತ್ತು ಅಧಿವೇಶನ ನಡೆದ ಸ್ಥಳಗಳು, ಸಭಾಧ್ಯಕ್ಷರು ಮತ್ತು ಅತಿಥಿಗಳ ಪಟ್ಟಿಯನ್ನು ಒದಗಿಸಿ ಮುಂದೆ ಇಂಥ ಪುಸ್ತಕ ಬರೆಯುವವರಿಗೆ ಮೇಲ್ಪಂಕ್ತಿ ಹಾಕಿ ಕೊಟ್ಟಿದ್ದಾರೆ.

ಸಂಗ್ರಾಮಪ್ಪನವರ ಪ್ರಭಾವ ಇನ್ನು ಬೀದರ ಜಿಲ್ಲೆಯಲ್ಲಿ ಉಳಿದ ಪರಿಯನ್ನು ಸಂಗ್ರಹಿಸಿದ್ದಾರೆ. ಉದಗೀರ ಹಾಗೂ ಬೀದರ ಮತ್ತು ಹೈದ್ರಾಬಾದ ಕರ್ನಾಟಕ ಜನತೆ ಸಂಗ್ರಾಮಪ್ಪನವರ ಸ್ಮರಣೆಗಾಗಿ ಯಾವ ಕಾರ್ಯ ಕೈಗೊಂಡಿದ್ದಾರೆಂಬುದ್ದನ್ನು ವಿಪುಲವಾಗಿ ಸಂಗ್ರಹಿಸಿ ಉತ್ತಮ ಚರಿತ್ರೆ ಪುಸ್ತಕವೆನಿಸುವಂತೆಯೇ ಮಾಡಿದ್ದಾರೆ. ವೀರಶೈವರಲ್ಲದವರು ಕೂಡ ಒಮ್ಮೆಯಾದರು ಓದುವಂಥಹ ಪುಸ್ತಕವಾಗಿದೆ. ಇಂಥ ಚರಿತ್ರೆಯ ಪುಸ್ತಕಗಳು ಇನ್ನು ಹೊರಬರಬೇಕು.

ಈ ಜೀವನ ಚರಿತ್ರೆಯು ಹೈದ್ರಾಬಾದ ಕರ್ನಾಟಕದ ಆಗಿನ ಕಾಲದ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಗದಗ ತೋಂಟದಾರ್ಯ ಮಠದಿಂದ ಪ್ರಕಟಿಸಿದ ಉತ್ತಮ ಪುಸ್ತಕಗಳಲ್ಲಿ ಇದು ಒಂದಾಗಿದೆ. ಈ ಪುಸ್ತಕವನ್ನು ಓದಿ ಡಾ. ಶಾಂತರಸ, ಡಾ. ನೀಲಮ್ಮ ಕತ್ನಳ್ಳಿ, ಶ್ರೀ ರಾಮಣ್ಣ ಕಾತರಹಳ್ಳಿ, ಉತ್ತಮ ರೀತಿಯ ಅಭಿಪ್ರಾಯಗಳನ್ನು ಬರೆದು ಕಳುಹಿಸಿದ್ದಾರೆ.

ಡಾ. ಜಿ.ಬಿ.ವಿಸಾಜಿ ಅವರ ಎರಡನೆಯ ಪ್ರಕಟಿತ ಜೀವನ ಚರಿತ್ರೆ ಶ್ರೀ ಚನ್ನಬಸವ ಪಟ್ಟದ್ದೇವರು (೧೯೯೦) ಇದಕ್ಕೆ ಪ್ರಸಿದ್ಧ ಕವಿಗಳಾದ ಚನ್ನವೀರ ಕಣವಿ ಅವರು ಮುನ್ನುಡಿಯನ್ನು ಬರೆದಿದ್ದಾರೆ. ಇದರಲ್ಲಿ ಮುಖ್ಯವಾಗಿ ಮೂರು ಘಟ್ಟಗಳನ್ನು ಕಾಣಬಹುದು. ಐದು ವರ್ಷದ ವಯಸ್ಸಿನಲ್ಲಿ ತಂದೆ ತಾಯಿಗಳನ್ನು ಕಳೆದುಕೊಂಡ ಕೂಸು ಮಹಾರುದ್ರಪ್ಪ ೧೯೨೪ರಲ್ಲಿ ಬಾಲ್ಕಿ ಹಿರೇಮಠದ ಪೀಠಾರೋಹಣ ಮಾಡುವವರೆಗಿನ ಅವಧಿಯನ್ನು ಮೊದಲನೆಯ ಮಹತ್ವದ ಘಟ್ಟವಾಗಿ ಪರಿಗಣಿಸಬಹುದು ಬೀದರ ಜಿಲ್ಲೆಯ ಆ ಭಾಗದ ಅಂದಿನ ಧಾರ್ಮಿಕ ಸಾಮಾಜಿಕ ಹಾಗೂ ಶೈಕ್ಷಣಿಕ ಪರಿಸ್ಥಿತಿಯ ನೈಜ ಚಿತ್ರಣದೊಂದಿಗೆ ಲೇಖಕರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಎರಡನೆಯ ಭಾಗ ಪೂಜ್ಯರು ಶಿವಯೋಗ ಮಂದಿರದಲ್ಲಿ ತರಬೇತಿ ಪಡೆದು ಅವರ ಧ್ಯೇಯವನ್ನು ಸಂಪೂರ್ಣ ಅಳವಡಿಸಿಕೊಂಡು ರಚನಾತ್ಮಕ ಕಾರ್ಯಗಳನ್ನು ಹಮ್ಮಿಕೊಂಡು ಬಂದದ್ದು ಶ್ರೀಗಳ ಜೀವನದ ಮಹತ್ವದ ದ್ವಿತೀಯ ಘಟ್ಟವಾಗಿದೆ. ಶಿಕ್ಷಣ ಪ್ರಸಾರ, ಧರ್ಮ ಜಾಗೃತಿ ಎರಡು ಉದ್ದೇಶಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅತ್ಯಂತ ಪರಿಶ್ರಮದಿಂದ ಮಠದ ಆರ್ಥಿಕ ಸ್ಥಿತಿಯನ್ನು ಸುಧಾರಿಸಿದ್ದು ಶ್ರೀಗಳ ಮಹತ್ವದ ಕಾರ್ಯವಾಗಿದೆ. ರಜಾಕಾರರ ಹಾವಳಿಯಲ್ಲಿಯೂ ವಿದ್ಯಾರ್ಥಿಗಳ ಶಿಕ್ಷಣವನ್ನು ಹಾಳಾಗದಂತೆ ನೋಡಿಕೊಂಡದ್ದು, ಕರ್ನಾಟಕದ ಏಕೀಕರಣದ ಹೋರಾಟದಲ್ಲಿ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದು ಶ್ರೀಗಳ ಸ್ಮರಣಾರ್ಹ ಸಂಗತಿಗಳಾಗಿವೆ. ಇಲ್ಲಿಂದ ಮುಂದೆ ಮೂರನೆಯ ಘಟ್ಟ ಶ್ರೀಗಳು ತಮ್ಮ ಶಿಕ್ಷಣ ಸಂಸ್ಥೆಗಳಿಗೆಲ್ಲ ಶಿವಶರಣರ ಹೆಸರುಗಳನ್ನು ಇಟ್ಟಿದ್ದಾರೆ. ಶ್ರೀಗಳು ಉದಗೀರದಲ್ಲಿ ವೀರಶೈವ ಸಮಾಜದ ಸ್ಥಾಪನೆ (೧೯೩೪), ಬೀದರ ಜಿಲ್ಲಾ ಕನ್ನಡಿಗರ ಪರಿಷತ್ತು (೧೯೫೫) ಕಾರ್ಯಗಳಲ್ಲಿ ಭಾಗವಹಿಸಿದ್ದು ಅಪೂರ್ವವಾಗಿದೆ. ಶ್ರೀಗಳು "ಶಾಂತಿಕಿರಣ" ವಾರ ಪತ್ರಿಕೆಯ ಮೂಲಕ ಜನಮನದ ಮೌಢ್ಯವನ್ನು ಕಳೆಯಲು ಮುಂದಾಗಿದ್ದಾರೆ. ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಕಾರ್ಯ ಮುಂದುವರೆಸಿದ್ದಾರೆ. ಅಂತರಜಾತಿಯ ವಿವಾಹಗಳಿಗೆ ಪ್ರೋತ್ಸಾಹ ನೀಡಿದ್ದಾರೆ. ತಮ್ಮ ಹಿರೇಮಠದ ಕುಡಿಯುವ ನೀರಿನ ಬಾವಿಯನ್ನು ಹರಿಜನರಿಗೆ ಮುಟ್ಟಿಸಿದ್ದಾರೆ. ಅನಾಥ ಮಕ್ಕಳ ಪಾಲನೆ ಮಾಡಿದ್ದಾರೆ. ದಲಿತರಿಗೆ ಲಿಂಗದೀಕ್ಷೆ, ಜಂಗಮದೀಕ್ಷೆಯನ್ನು ನೀಡಿ ಗುರುಮುಟ್ಟು, ಗುರು ಸಮಾನವಾಗಿ ಮಾಡಿದ್ದಾರೆ. ಆಧುನಿಕ ಕಾಲದಲ್ಲಿ ಶರಣರ ತತ್ವಗಳನ್ನು ಸಾಕಾರ ರೂಪದಲ್ಲಿ ತಂದಿದ್ದಾರೆ. ಗಡಿನಾಡಿನಲ್ಲಿ ಸದಾ ಕ್ರಿಯಾಶೀಲರಾಗಿರುವ ಭಾಲ್ಕಿ ಶ್ರೀಗಳ ಮೀರಿದ ವ್ಯಕ್ತಿತ್ವವನ್ನು ತಮ್ಮ ಮಾತುಗಳಲ್ಲಿ ಮೂಡಿಸುವ ಪ್ರಯತ್ನದಲ್ಲಿ ಶ್ರೀ ವಿಸಾಜಿ ಅವರು ಸಾಕಷ್ಟು ಯಶಸ್ವಿಯಾಗಿದ್ದಾರೆಂದು ಚನ್ನವೀರ ಕಣವಿ ಅವರು ತಿಳಿಸಿದ್ದಾರೆ.

"ಒಂದು ಸುದ್ಧ ಸಾರ್ಥಕ ಜೀವನವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟಿದ್ದೀರಿ. ಇಂತಹ ಬದುಕುಗಳು ಸದಾ ದಾರಿದೀಪಗಳು, ನಿಮ್ಮ ಕೃತಿ ರಚನೆಯ ಆಶಯ ಸ್ತುತ್ಯಾರ್ಹವಾಗಿದೆ."[೧೯] ಎಂದು ಡಾ. ಹಾ.ಮಾ. ನಾಯಕ ಅವರು ತಿಳಿಸಿದ್ದಾರೆ.

ಶ್ರೀ ಚನ್ನಬಸವ ಪಟ್ಟದ್ದೇವರು ಈ ಜೀವನ ಚರಿತ್ರೆಯನ್ನು ಡಾ. ಶಾಂತರಸ ರಾಯಚೂರು ಅವರು "ಕಾಯಕ ಪರಿಣಾಮಿ" ಸಂಭಾವನಾ ಗ್ರಂಥದಲ್ಲಿಯು ಬಳಸಿಕೊಂಡಿದ್ದಾರೆ. "ಶ್ರೀ ಚನ್ನಬಸವ ಪಟ್ಟದ್ದೇವರು" ಈ ಗ್ರಂಥ ನಾಂದೇಡದ ಸ್ವಾಮಿ ರಾಮಾನಂದ ತೀರ್ಥ ಮರಾಠಾವಾಡಾ ವಿದ್ಯಾಪೀಠದ ಬಿ.ಎ. ತರಗತಿಗೆ ಪಠ್ಯಪುಸ್ತಕವನ್ನಾಗಿ ೨೦೦೦ರಿಂದ ಇಲ್ಲಿಯವರೆಗೆ ಅಭ್ಯಾಸಕ್ಕೆ ಅಳವಡಿಸಲಾಗಿದೆ. ಶ್ರೀ ಚನ್ನಬಸವ ಪಟ್ಟದ್ದೇವರು ಕುರಿತು ಡಾ. ಜಿ.ಬಿ.ವಿಸಾಜಿ ಅವರು ಬರೆದ "ಪೂಜ್ಯ ಚನ್ನಬಸವ ಪಟ್ಟದ್ದೇವರು" ಲೇಖನವನ್ನು ಬಿ.ಎಸ್ಸಿ. ಭಾಗ–೧ ಪ್ರಥಮ ಸೆಮಿಸ್ಟರ ಬೇಸಿಕ್ ಪಠ್ಯಪುಸ್ತಕ ನಮ್ಮ ಬೆಳಕು ಭಾಗ–೨ "೨೦೦೬" ಅಭ್ಯಾಸಕ್ಕಾಗಿ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ ಅವರು ನಿಯೋಜಿಸಿದ್ದಾರೆ. ಶ್ರೀ ಚನ್ನಬಸವ ಪಟ್ಟದ್ದೇವರು ಈ ಭಾಗದಲ್ಲಿ ನಡೆದಾಡುವ ದೇವರಾಗಿದ್ದರು. ಕನ್ನಡದ ರಕ್ಷಾಮಣಿಗಳಾಗಿದ್ದರು. ಶಿಕ್ಷಣ ಪ್ರೇಮಿಗಳಾಗಿದ್ದರು. ಶರಣರ ಪರಂಪರೆ ಬೆಳೆಸಿದ ಶ್ರೇಷ್ಠ ವ್ಯಕ್ತಿಗಳಾಗಿದ್ದರು. ಅವರು ತ್ರಿವಿಧ ದಾಸೋಹಿಗಳಾಗಿದ್ದರು. ಅನ್ನ, ಅರಿವು, ಶಿಕ್ಷಣ, ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ನಿರಂತರವಾಗಿ ನೀಡಿದ್ದಾರೆ.

ಪೂಜ್ಯ ಚನ್ನಬಸವ ಸ್ವಾಮಿಗಳವರಿಗೆ ಗುಲಬರ್ಗಾ ವಿಶ್ವವಿದ್ಯಾಲಯ ಡಾಕ್ಟರೇಟ ಪದವಿ ನೀಡಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ದೊರಕಿದೆ. ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತು ಅವರನ್ನು ಗೌರವಿಸಿದೆ. ಇತ್ತೀಚಿಗೆ ಕರ್ನಾಟಕ ಏಕೀಕರಣ ಸುವರ್ಣ ಪ್ರಶಸ್ತಿಯನ್ನು ಕೂಡ ನೀಡಲಾಗಿದೆ. ಸ್ವಾಮಿಗಳು ಪ್ರಗತಿಪರ ದೃಷ್ಟಿಕೋನವುಳ್ಳವರಾಗಿದ್ದರು. ಬಸವಕಲ್ಯಾಣದಲ್ಲಿ ನೂತನ ಅನುಭವ ಮಂಟಪ ನಿರ್ಮಿಸಲು ಕಾರಣರಾಗಿದ್ದಾರೆ. ಮಾಜಿ ರಾಷ್ಟ್ರಪತಿ ಜೇಲಸಿಂಗ್ ಅವರಿಂದ ದೆಹಲಿಯಲ್ಲಿ ಅವರಿಗೆ ಸನ್ಮಾನಿಸಲಾಯಿತು.

ಡಾ. ಚನ್ನಬಸವ ಪಟ್ಟದ್ದೇವರು ಮಹಿಳೆಯರ ಅಭಿವೃದ್ಧಿಗಾಗಿ ಸಾಕಷ್ಟು ಕಾರ್ಯ ಮಾಡಿದ್ದಾರೆ. ಮಹಿಳೆಯರಿಗಾಗಿಯೇ ಪ್ರತ್ಯೇಕ ಶಾಲಾ–ಕಾಲೇಜುಗಳನ್ನು ತೆರೆದಿದ್ದಾರೆ. ಮಹಿಳೆಯರಿಗೆ, ಗಾಯನ, ಭಾಷಣ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹೆಚ್ಚಿನ ಸ್ಥಾನ, ಮಾನ ಕೊಟ್ಟು ಗೌರವಿಸುತ್ತಿದ್ದರು. ಡಾ. ಜಯದೇವಿ ತಾಯಿ ಲಿಗಾಡೆ ಅವರು ಪೂಜ್ಯ ಚನ್ನಬಸವ ಪಟ್ಟದ್ದೇವರ ರಚನಾತ್ಮಕ ಕಾರ್ಯಗಳನ್ನು ಕಂಡು ಸಂತೋಷ ವ್ಯಕ್ತಪಡಿಸಿದ್ದಾರೆ. ಅವರ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದಾರೆ.

ಕೊಳ್ಳೂರು ಹುಸನಾಸಾಹೇಬರು (೧೯೯೮) ಜೀವನ ಪರಿಚಯ ಡಾ. ಜಿ.ಬಿ. ವಿಸಾಜಿ ಅವರ ಮೂರನೇಯ ಗ್ರಂಥವಾಗಿದೆ. ಇದು ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾದ ಪ್ರಚಾರೋಪನ್ಯಾಸಮಾಲೆಯ ೧೨೧ನೇಯ ಗ್ರಂಥವಾಗಿದೆ. ಈ ಪುಸ್ತಕ ೨೮ ನವೆಂಬರ ೧೯೯೭ರಂದು ಹುಮನಾಬಾದ ತಾಲ್ಲೂಕಿನ ಚಂದನಹಳ್ಳಿ ಗ್ರಾಮದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ೫೧ನೆ ಪ್ರಚಾರೋಪನ್ಯಾಸ ಶಿಬಿರದಲ್ಲಿ ಮಂಡಿಸಿದ ಪ್ರಬಂಧವಾಗಿದೆ. ಕೊಳ್ಳೂರು ಹುಸನಾಸಾಹೇಬರು ಈವರೆಗು ಉಪೇಕ್ಷೆಗೆ ಒಳಗಾಗಿದ್ದ ತತ್ವಪದಕಾರರಲ್ಲಿ ಒಬ್ಬರಾಗಿದ್ದಾರೆ. ಅವರು ಸುತ್ತ-ಮುತ್ತಲಿನ ಪ್ರದೇಶವನ್ನು ಕೋಮು ಸೌಹಾರ್ದತೆಯ ಜಾಗೃತ ಸ್ಥಳವಾಗಿ ಉಳಿಯುವಂತೆ ತಮ್ಮ ಸಾಂಸ್ಕೃತಿಕ ಚಟುವಟಿಕೆಗಳಿಂದ ಬದುಕಿದವರಾಗಿದ್ದಾರೆ. ಅವರು ಕನ್ನಡ ಸಾಹಿತ್ಯದ ಸೃಜನಶೀಲತೆಯ ಶಕ್ತಿಯುತ ಧ್ವನಿಯನ್ನು ತಮ್ಮ ಪ್ರತಿಭೆಯಿಂದ ಪ್ರಕಟಪಡಿಸಿದವರಾಗಿದ್ದಾರೆ.

ಹುಸನಾಸಾಹೆಬರು ಕೊಳ್ಳೂರು ಗ್ರಾಮದಲ್ಲಿ ಕ್ರಿ.ಶ. ೧೯೦೦ರಲ್ಲಿ ತಂದೆ ಲಾಲಸಾಹೆಬ ತಾಯಿ ಇಮಾಮಬಿ ಅವರ ಉದರದಲ್ಲಿ ಜನಿಸಿದ್ದಾರೆ. ಇವರು ಪಿಂಜಾರ ಮನೆತನದವರು. ಅವರು ಭದ್ರಪ್ಪ ಗೌಡರ ಶಾಲೆಯಲ್ಲಿ ಶಿಕ್ಷಣ ಕಲಿತಿದ್ದಾರೆ. ಕೋಹಿನೂರಿನಲ್ಲಿ ಪ್ರತಿಯೊಂದು ಹಬ್ಬ ಹರಿದಿನಗಳು ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾರೆ. ಈ ಎಲ್ಲದರ ಪ್ರಭಾವ ಹುಸನಾಸಾಹೇಬರ ಮೇಲೆ ಆಗಿದೆ. ಇವರು "ಕಂಸವಧೆ" ನಾಟಕದಲ್ಲಿ ಕೃಷ್ಣನ ಪಾತ್ರವಹಿಸಿದರು. ಹುಸನಾಸಾಹೇಬರ ಹೆಂಡತಿ ಹೆಸರು ಚಂದಮ್ಮ ಇವರಿಗೆ ಐದ ಜನ ಮಕ್ಕಳು. ಹುಸನಾಸಾಹೇಬರು ತಬಲಾ, ಹಾರ್ಮೋನಿಯಂ ಭಾರಿಸುತ್ತಿದ್ದರು. ಗೀಗೀ ಪದಗಳನ್ನು ರಚಿಸಿದ್ದಾರೆ. ತಮ್ಮ ಉಪಜೀವನಕ್ಕಾಗಿ ಟೇಲರಿಂಗ ಕಾರ್ಯ ಮಾಡುತ್ತಿದ್ದರು. ರಜಾಕಾರರ ಚಳುವಳಿಯಲ್ಲಿ ಇವರನ್ನು ಮತ್ತು ಇವರ ಮಕ್ಕಳನ್ನು ಸಿರ್ಗಾಪುರದ ಧರ್ಮರಾವ ಬಿರಾದಾರ ಅವರು ಉಳಿಸಿದರು. ಇವರ ಅಂಕಿತನಾಮ "ಕೊಳ್ಳೂರು ಹುಸನಾ" ಎಂದಿದೆ. ಇವರು ಅನೇಕ ಭಜನೆ ಪದಗಳನ್ನು ಬರೆದಿದ್ದಾರೆ. ಕೊಳ್ಳೂರುನಲ್ಲಿ ಅಭಿನಯಿಸಿದ ಕುರುಕ್ಷೇತ್ರ ನಾಟಕಕ್ಕೆ ಇವರು ಹಾಡುಗಳನ್ನು ರಚಿಸಿದರು. ಇವರು ಮೊಹರಂ ಪದಗಳನ್ನು ರಚಿಸಿದ್ದಾರೆ. ತಾವು ಭದ್ರಪ್ಪ ಗೌಡರ ಶಿಷ್ಯರೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.

"ಭದ್ರಪ್ಪನ ಶಿಷ್ಯ ಕೊಳ್ಳೂರ ಹುಸನಾ
ಹಾಡ್ಯಾನ ಸಭಾದಾಗ"[೨೦]

ಹುಸನಾಸಾಹೇಬರು ಎಲ್ಲ ದೇವರ ಗುಡಿಗಳಲ್ಲಿ ಭಜನೆ ಮಾಡುತ್ತಿದ್ದರು. ಭೇದಭಾವ ಮಾಡುತ್ತಿದ್ದಿಲ್ಲ. "ದೇವನೊಬ್ಬ ನಾಮ ಹಲವು" ಅವರು ಬಲವಾಗಿ ನಂಬಿದ್ದರು. ಅವರ ಪದಗಳಿಂದ ಹಾರಕೂಡ ಪೂಜ್ಯರ ಮೇಲಿನ ಭಕ್ತಿ ಎದ್ದು ಕಾಣುತ್ತದೆ. ಅವರು ಸವಾಲು-ಜವಾಬ ಪದಗಳನ್ನು ರಚಿಸಿದ್ದಾರೆ. ಅವರು ಪ್ರಾಸ ಪ್ರಿಯರಾಗಿದ್ದರು. ಅವರ ತತ್ವ ಪದಗಳು ಮೆಲ್ಮಟ್ಟದ್ದಾಗಿವೆ. ಇಡೀ ಜೀವನವೆಲ್ಲ ಅವರು ಹಾಡುಗಾರಿಕೆಯಲ್ಲಿಯೇ ಕಳೆದಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರ ನಾಲ್ಕನೇ ಜೀವನ ಚರಿತ್ರೆಯ ಪುಸ್ತಕ ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆಯಲ್ಲಿ ಪ್ರಕಟವಾದ "ಕೇಶವರಾವ ನಿಟ್ಟೂರಕರ" (೨೦೦೬) ಇದರಲ್ಲಿ ಐದು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮೊದಲನೇಯ ಭಾಗದಲ್ಲಿ ಶ್ರೀ ಕೇಶವರಾವ ನಿಟ್ಟೂರಕರ ಜೀವನ ಮತ್ತು ವ್ಯಕ್ತಿತ್ವವನ್ನು ಕುರಿತು ಬರೆಯಲಾಗಿದೆ. ಭಾಗ ಎರಡರಲ್ಲಿ ವಿಧಾನ ಪರಿಷತ್ತಿನಲ್ಲಿ ಕೇಶವರಾವ ನಿಟ್ಟೂರಕರ ಭಾಷಣಗಳನ್ನು ಸಂಗ್ರಹಿಸಿಕೊಡಲಾಗಿದೆ. ಅವುಗಳಲ್ಲಿ ವಿದ್ಯುತ್ ಮಂಡಳಿಯ ಆಯವ್ಯಯ ಚರ್ಚೆ, ಉತ್ಪಾದನಾ ರಂಗದಲ್ಲಿ ಎಚ್ಚರಿಕೆ ವಹಿಸಿ, ಸಮತೋಲನ ಕಾಯ್ದುಕೊಳ್ಳಬೇಕು. ಪ್ರಾಂತೀಯ ಅಸಮಾನತೆ ಹೊಡೆಯಿರಿ. ಬಂಡವಾಳ ಷಾಹಿಗಳ ಬೇರು ಕತ್ತರಿಸಿ, ಸಹಕಾರ ಹೊಂದಾಣಿಕೆಗಳ ಕೊರತೆ, ಗಾಂಧಿ ತತ್ವಗಳಿಂದ ದೂರ, ಕೃಷಿ ಶಿಕ್ಷಣ ಆರೋಗ್ಯಕ್ಕೆ ಆದ್ಯತೆ, ಬೆಂಗಳೂರು ವಿಶ್ವವಿದ್ಯಾಲಯ ಕೇಂದ್ರ ವಿಶ್ವವಿದ್ಯಾಲಯವಾಗಲಿ, ಮಹಾಜನ ವರದಿ ಸ್ವಾಗತ, ಮೈಸೂರು ಭೂ ಸುಧಾರಣೆ ಮಸೂದೆ, ನಗದು ಅನುದಾನ ರದ್ದು ಪಡಿಸುವಿಕೆ, ನಿವೃತ್ತರ ಬಿಳ್ಕೊಡುಗೆ, ಈ ಭಾಷಣಗಳು ಅತ್ಯಂತ ಅರ್ಥಪೂರ್ಣವು ಸಕಾಲಿಕವು ಆಗಿದೆ. ಅವರು ಸದನದಲ್ಲಿ ಬಿಡಿಸಿದ ವ್ಯಕ್ತಿ ಚಿತ್ರಗಳು ಸರ ಮಿರ್ಜಾ ಇಸ್ಮಾಯಿಲ, ಶಿಕಾರಿಪುರದ ನರ್ಸಪ್ಪ, ವ್ಹಿ.ಸಿ. ಪಾವಟೆ, ಎಚ್.ಎಫ್. ಕಟ್ಟಿಮನಿ, ಪಂಡಿತ ಜವಾಹರಲಾಲ ನೆಹರು, ಎಸ್.ಬಿ. ಗಾಂವಕರ ಮತ್ತು ಲಾಲಬಹದ್ದೂರ ಶಾಸ್ತ್ರಿ ಇವರನ್ನು ಕುರಿತು ಮಾಡಿದ ಅವರ ಭಾಷಣಗಳು ಮನಸ್ಸಿಗೆ ನಾಟುವಂತಿವೆ.

ಶ್ರೀ ಕೇಶವರಾವ ನಿಟ್ಟೂರಕರ ಅವರು ವಿಧಾನ ಪರಿಷತ್ತಿನಲ್ಲಿ ಅನೇಕ ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದಿದ್ದಾರೆ. ಅವರು ಶಿಕ್ಷಣಕ್ಕೆ, ರಸ್ತೆಗಳಿಗೆ, ನೀರಾವರಿಗೆ, ವಿದ್ಯುತ ಪೂರೈಕೆಗೆ, ಆಸ್ಪತ್ರೆಗಳಿಗಾಗಿ, ಶಿಕ್ಷಕರ ಮುಂಬಡ್ತಿಗಾಗಿ, ತ್ರಿಭಾಷಾ ಸೂತ್ರಕ್ಕಾಗಿ ಸಹಕಾರಿ ಬ್ಯಾಂಕುಗಳ ಉದಾರೀಕರಣಕ್ಕಾಗಿ ಕಳಕಳಿಯಿಂದ ಹೋರಾಡಿದ್ದಾರೆ. ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸಲು ಪ್ರಯತ್ನಿಸಿದ್ದಾರೆ. ನಕ್ಸಲೈಟರ ಬಗ್ಗೆ ಜಾಗೃತಿ ಮೂಡಿಸಿದ್ದಾರೆ. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಮತ್ತು ವಿದ್ಯಾರ್ಥಿನಿಯರ ವಸತಿ ಗೃಹಕ್ಕಾಗಿ ಶ್ರಮಿಸಿದ್ದಾರೆ. ಯು.ಜಿ.ಸಿ. ವೇತನಕ್ಕಾಗಿ ಹೋರಾಡಿದ್ದಾರೆ. ಪಶು ಚಿಕಿತ್ಸಾಲಯಕ್ಕೆ ರೆಫ್ರಿಜಿಯೇಟರ ಕೊಡಲು ಒತ್ತಾಯಿಸಿದ್ದಾರೆ. ಗ್ರಾಮ ಪಂಚಾಯತ್‌ಗಳಿಗೆ ಶಾಶ್ವತ ಲೆಕ್ಕಾಧಿಕಾರಿಗಳು, ಕಾರ್ಯದರ್ಶಿಗಳು ಬೇಕೆಂದು ಹೋರಾಡಿದ್ದಾರೆ. ಕಿತ್ತೂರು ರಾಣಿ ಚನ್ನಮ್ಮ ಸೈನಿಕ ಶಾಲೆ ಬೇಕೆಂದು ಒತ್ತಾಯಿಸಿದ್ದಾರೆ. ಅವರು ಪ್ರಗತಿಪರ ಪ್ರಶ್ನೆಗಳನ್ನು ಕೇಳಿ ಕರ್ನಾಟಕ ರಾಜ್ಯ ಭಾರತದಲ್ಲಿ ಮುಂಚೂಣಿಯಲ್ಲಿರುವಂತೆ ಪ್ರಯತ್ನಿಸಿದ್ದಾರೆ.

ಭಾಗ ಮೂರರಲ್ಲಿ ನಿಟ್ಟೂರ ಗ್ರಾಮದ ಅಭಿವೃದ್ಧಿ ಮತ್ತು ಶ್ರೀ ಕೇಶವರಾವ ನಿಟ್ಟೂರಕರ ಅವರ ಮೈಲಿಗಲ್ಲುಗಳನ್ನು ದಾಖಲಿಸಲಾಗಿದೆ. ಭಾಗ ನಾಲ್ಕರಲ್ಲಿ ಸಮಕಾಲೀನರ ದೃಷ್ಟಿಯಲ್ಲಿ ಶ್ರೀ ಕೇಶವರಾವ ನಿಟ್ಟೂರಕರ ಚಿತ್ರವನ್ನು ಚಿತ್ರಿಸಲಾಗಿದೆ. ಮಹ್ಮದ ಲೈಕೋದ್ದೀನ, ಖಾಜಿ ಅರ್ಷದ ಅಲಿ ಅವರ ಡಾ. ರಾಜೇಂದ್ರ ನಿಟ್ಟೂರಕರ ಅವರ ಪತ್ನಿ ಕುಸುಮ ತಾಯಿ ನಿಟ್ಟೂರಕರ, ಮಾಣಿಕರಾವ ಪೂಲೇಕರ, ಪ್ರಕಾಶ ಖಂಡ್ರೆ, ಮಹಾರುದ್ರಪ್ಪ ಸಿರ್ಸೆ, ಶಿವರಾಜ

ಪಾಟೀಲ, ಮಾಣಿಕರಾವ ಜಾನಪೂರಕರ, ಗೋವಿಂದರಾವ ನಿಟ್ಟೂರಕರ, ಶ್ರೀಮಂತರಾವ ಪಾಟೀಲ, ಶಂಕರರಾವ ಶೆಟ್ಟಕಾರ, ಪ್ರೊ ವಸಂತ ಕುಷ್ಟಗಿ, ಡಾ. ವ್ಹಿ.ಪಿ. ದೇವಳಗಾಂವಕರ ಇವರ ಅಭಿಪ್ರಾಯಗಳನ್ನು ಡಾ. ಜಿ.ಬಿ. ವಿಸಾಜಿ ಅವರು ಸತ್ಯನಿಷ್ಠವಾಗಿ ವರದಿ ಮಾಡಿದ್ದಾರೆ.

ಮುಂದಿನ ಭಾಗದಲ್ಲಿ ಪತ್ರಿಕೆಗಳಲ್ಲಿ ಶ್ರೀ ಕೇಶವರಾವ ನಿಟ್ಟೂರಕರ ಅವರ ವ್ಯಕ್ತಿತ್ವ ಚಿತ್ರಿಸಲಾಗಿದೆ. "ಶಾಂತಿಕಿರಣ"ದಲ್ಲಿ ಬಂದ ಅವರ ಅನಿಸಿಕೆ, "ದೈನಿಕ ಲೋಕಮತ" ಪತ್ರಿಕೆಯಲ್ಲಿ ಬಂದ ಅವರ ಅನಿಸಿಕೆ, ಮರಾಠವಾಡ "ನೇತಾ" ದಿನ ಪತ್ರಿಕೆಯಲ್ಲಿ ಬಂದ ಅವರ ಬಗೆಗಿನ ವರದಿಗಳು ನಿಟ್ಟೂರಕರ ಅವರ ವ್ಯಕ್ತಿತ್ವವನ್ನು ಹೆಚ್ಚಿಸುತ್ತವೆ. ಬೀದರ ಕೆಥೋಲಿಕ ಧರ್ಮ ಸಭೆಯ ಯಾತ್ರಾ ಉತ್ಸವ ೨೦೦೦ ಏಸು ನಿಲಯ ಭಾಲ್ಕಿಯಲ್ಲಿ ಶ್ರೀಮಾನ ಕೇಶವರಾವ ನಿಟ್ಟೂರಕರ ಅವರಿಗೆ ವಿಶೇಷ ಸೇವಾ ಸನ್ಮಾನ ನೀಡಿ ಗೌರವಿಸಿದ್ದಾರೆ. ಶ್ರೀ ಕೇಶವರಾವ ನಿಟ್ಟೂರಕರ ಅವರು ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ಉತ್ತಮ ನ್ಯಾಯವಾದಿಗಳಾಗಿ ಹಣ, ಅಧಿಕಾರ, ಅಂತಸ್ತುಗಳ ದುರಾಸೆಗಳಿಗೆ ತುತ್ತಾಗದೆ ಮಹಾತ್ಮ ಗಾಂಧೀಜಿ ಅವರ ತತ್ವಗಳನ್ನು ಅವರ ಸರಳ ವ್ಯಕ್ತಿತ್ವವನ್ನು ಖಾದಿ ಪ್ರೇಮವನ್ನು ಮುಮದುವರೆಯಿಸಿಕೊಂಡು ಬಂದಿದ್ದಾರೆ. ಆಗಿನ ಧರ್ಮಾಧ್ಯಕ್ಷರ ಪ್ರತಿನಿಧಿಗಳಾದ ಸ್ವಾಮಿ ರಾಬರ್ಟ ಮಿರಾಂಧ ಅವರು ಈ ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದಾರೆ.

ಅದೇ ಸಂದರ್ಭದಲ್ಲಿ ಡಾ. ಜಿ.ಬಿ. ವಿಸಾಜಿ ಅವರಿಗು ಕೆಥೋಲಿಕ ಧರ್ಮ ಸಭೆಯಿಂದ ಸೇವಾ ಸನ್ಮಾನ ದೊರಕಿದೆ. ಭಾಗ ಐದರಲ್ಲಿ ಶ್ರೀ ಕೇಶವರಾವ ನಿಟ್ಟೂರಕರ ಅವರ ಭಾವಚಿತ್ರ ಸಂಪುಟ ಕೊಡಲಾಗಿದೆ. ಇದರಲ್ಲಿ ಅಪರೂಪದ ಅವರ ತಾಯಿ, ಶ್ರೀಮತಿ ಗೋದಾವರಿ ಅವರ ಚಿತ್ರ ಅವರ ಸಮಕಾಲೀನ ಶಾಸಕರಾದ ಮುರಳೀಧರರಾವ ಕಾಮತೀಕರ, ಬಳವಂತರಾವ ಖಾನಾಪುರಕರ, ಮಾಧವರಾವ, ಮಕ್ಸುದ ಅಲಿಖಾನ, ಮಾಣಿಕರಾವ ಪೂಲೆಕರ ಇವರ ಭಾವಚಿತ್ರಗಳು ಅವರ ಕುಟುಂಬದ ಭಾವಚಿತ್ರಗಳು ಮತ್ತು ಕರ್ನಾಟಕದ ಉಚ್ಛನ್ಯಾಯಾಲಯದ ಮುಖ್ಯನ್ಯಾಯಾಧೀಶರಾದ ಡಿ.ಎಂ. ಚಂದ್ರಶೇಖರ ಅವರ ಜೊತೆಗಿನ ಭಾವಚಿತ್ರಗಳು ಬಹಳ ಅಪರೂಪದ್ದಾಗಿವೆ.

ಶಿಕ್ಷಕರ ಪ್ರತಿನಿಧಿಯಾಗಿ ಕರ್ನಾಟಕ ವಿಧಾನ ಪರಿಷತ್ತಿನಲ್ಲಿ ಮೂರು ಬಾರಿ ಸದಸ್ಯರಾಗಿದ್ದವರು. ಶ್ರೀ ಕೇಶವರಾವ ನಿಟ್ಟೂರಕರ ಅವರು ವಿಧಾನ ಪರಿಷತ್ತಿನ ಉಪ ಸಭಾಪತಿಗಳಾಗಿ ಅವಿಸ್ಮರಣೀಯ ಸೇವೆಯನ್ನು ಸಲ್ಲಿಸಿದ್ದಾರೆ. ಅತ್ಯುತ್ತಮ ವಾಗ್ಮಿಗಳಾಗಿದ್ದಾರೆ. ಅವರು ಗ್ರಾಮೀಣ ಅಭಿವೃದ್ಧಿಗೆ ಹಾಗೂ ಶೈಕ್ಷಣಿಕ ಅಭಿವೃದ್ಧಿಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಡಾ, ಜಿ.ಬಿ. ವಿಸಾಜಿ ಅವರು ಕೇಶವರಾವ ನಿಟ್ಟೂರಕರ ಅವರನ್ನು ಕುರಿತು ಬರೆದ ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಬೀದರ ಜಿಲ್ಲೆಯಲ್ಲಿ ಪ್ರಥಮವಾಗಿವೆ.

ಡಾ. ಜಿ.ಬಿ. ವಿಸಾಜಿ ಅವರು "ಉರಿಲಿಂಗ ಪೆದ್ದಿ" (೨೦೦೬) ಜೀವನ ಪರಿಚಯವನ್ನು ಹೈದ್ರಾಬಾದ ಕರ್ನಾಟಕ ಸಾಂಸ್ಕೃತಿಕ ಪರಿಚಯ ಪುಸ್ತಕ ಮಾಲೆ, ಸೇಡಂ ಆಶ್ರಯದಲ್ಲಿ ಪ್ರಕಟಿಸಿದ್ದಾರೆ. ಇದು ಆ ಪುಸ್ತಕ ಮಾಲೆಯ ೨೧ನೇ ಪುಸ್ತಕವಾಗಿದೆ. ಈ ಪುಸ್ತಕ ಪ್ರಕಟಣಾ ಸಮಿತಿಯ ಅಧ್ಯಕ್ಷರು ಶ್ರೀ ಬಸವರಾಜ ಪಾಟೀಲ ಸೇಡಂ ಅವರಾಗಿದ್ದು, ಗ್ರಂಥ ಪ್ರಕಟಣಾ ವಿಭಾಗದ ಪ್ರಧಾನ ಸಂಪಾದಕರು ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ ಆಗಿದ್ದಾರೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೨ನೇ ಶತಮಾನ ವಿಶಿಷ್ಟವಾದುದ್ದಾಗಿದೆ. ಅನೇಕ ವಚನಕಾರರು ವಚನಗಳನ್ನು ರಚಿಸಿದ್ದಾರೆ. ಅಂತಹ ವಚನಕಾರರಲ್ಲಿ ಉರಿಲಿಂಗ ಪೆದ್ದಿಗಳು ಒಬ್ಬರು. ಅವರ ಧರ್ಮಪತ್ನಿ ಕಾಳವ್ವೆ ಎಂಬುದು ಗೊತ್ತಾಗುತ್ತದೆ. ಶರಣೆ ಕಾಳವ್ವೆ ವಚನಗಳನ್ನು ಬರೆದಿರುವಳು. ಈಕೆಯ ವಚನಗಳ ಅಂಕಿತ "ಉರಿಲಿಂಗ ಪೆದ್ದಿಗಳ ಗುರುಪರಂಪರೆ" ಶ್ರೇಷ್ಠ ಪರಂಪರೆಯಾಗಿದೆ. ಇವರು ಒಟ್ಟು ೩೬೬ ವಚನಗಳನ್ನು ಬರೆದಿದ್ದಾರೆ. ಇವರ ಅಂಕಿತ "ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರ" ಎಂದಿದೆ. ಇವರ ವಚನಗಳು ಸಂಸ್ಕೃತ ಉದ್ಧರಣೆಗಳಿಂದ ತುಂಬಿದೆ. ಉರಿಲಿಂಗ ಪೆದ್ದಿ ಅವರ ವಚನಗಳನ್ನು ಅವಲೋಕಿಸಿದಾಗ ಅವರ ಪ್ರಬುದ್ಧ ಪಾಂಡಿತ್ಯ ಅದ್ವಿತಿಯ ಪ್ರತಿಭೆಗಳ ಪರಿಚಯವಾಗುತ್ತದೆ. ಉರಿಲಿಂಗ ಪೆದ್ದಿಗಳು ತಮ್ಮ ವಚನಗಳಲ್ಲಿ ಅಷ್ಟಾವರಣಗಳ ಮಹತ್ವವನ್ನು ವಿವರಿಸಿದ್ದಾರೆ. ದಾಸೋಹಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದಾರೆ. ತಮ್ಮ ವಚನಗಳಲ್ಲಿ ಮಾಲೋಪಮೆ ಬಳಸಿದ್ದಾರೆ. ಅವರ ವಚನಗಳಲ್ಲಿ ಮಡಿವಾಳ ಮಾಚಯ್ಯ ಮತ್ತು ಬಸವಣ್ಣನವರನ್ನು ಹೃದಯ ಪೂರ್ವಕ ಸ್ಮರಿಸಿದ್ದಾರೆ. ಉರಿಲಿಂಗ ಪೆದ್ದಿ ಸ್ವತಂತ್ರ ವಿಚಾರವಾದಿಯಾಗಿದ್ದಾನೆ. ಉರಿಲಿಂಗ ಪೆದ್ದಿಗಳು ಲಿಂಗದ ಮಹಾಬೆಳಕಿನಲ್ಲಿ ಒಂದಾಗಿದ್ದಾರೆ. ಉರಿಲಿಂಗ ಪೆದ್ದಿ ಅವರ ವಚನಗಳಲ್ಲಿ ಅನೇಕ ಗಾದೆಮಾತುಗಳು ಬಳಕೆಯಾಗಿವೆ. ಇವರ ವಚನಗಳಲ್ಲಿ ಲಿಂಗಾಯತ ಧರ್ಮದ ತಾತ್ವಿಕ ಅಂಶಗಳ ವಿವರಣೆ ಹೆಚ್ಚಾಗಿದೆ.

ಉರಿಲಿಂಗ ಪೆದ್ದಿ ಮಠಗಳು ಮಹಾರಾಷ್ಟ್ರದ ನಾಂದೇಡ ಸಮೀಪದ ಕಂದಹಾರದಲ್ಲಿಯು, ಬಸವಕಲ್ಯಾಣ, ಭಾಲ್ಕಿ, ಬೇವಿನ ಚಿಂಚೋಳಿ, ಬೇಮಳಖೇಡ, ಬೇಲೂರ, ಕೋರಳ್ಳಿ, ಕೋಡ್ಲಾ ಮೈಸೂರು, ಕೊಳ್ಳೆಗಾಲ ತಾಲ್ಲೂಕಿನ ಮಣಗಳ್ಳಿ, ಜಿ. ನರಸಿಪುರ ತಾಲ್ಲೂಕಿನ ಉಡುಕುತೋರೆ ಮತ್ತು ಕುಣಿಗಲ್ಲದಲ್ಲಿಯು ಇವೆ. ಉರಿಲಿಂಗ ಪೆದ್ದಿಗಳು ಬಸವಣ್ಣನವರ ಸಮಕಾಲೀನ ಪ್ರಖ್ಯಾತ ವಚನಕಾರರಾಗಿದ್ದಾರೆ. ಶೂದ್ರನೊಬ್ಬನಿಗೆ ಸದ್ಗುರು ದೊರೆತರೆ ಸನ್ಮಾರ್ಗದ ಉಪದೇಶವಾದರೆ ತನ್ನ ಸಾಧನೆಯಿಂದ ಎಷ್ಟೊಂದು ಎತ್ತರಕ್ಕೆ ಏರಬಲ್ಲನು ಎಂಬುದಕ್ಕೆ "ಉರಿಲಿಂಗ ಪೆದ್ದಿಗಳ ವ್ಯಕ್ತಿತ್ವವೇ ಒಂದು ಉತ್ತಮ ಸಾಕ್ಷಿಯಾಗಿದೆ."[೨೧] ಈ ಪುಸ್ತಕವು ಉರಿಲಿಂಗ ಪೆದ್ದಿ ಅವರ ಜೀವನ ಸಾಧನೆಯನ್ನು ಸಾಮಾನ್ಯ ಓದುಗರಿಗೆ ಸಹೃದಯರಿಗೆ ಸರಳವಾಗಿ ಪರಿಚಯಿಸುವಲ್ಲಿ ಸಫಲವಾಗಿದೆ.

"ಡಾ. ಚನ್ನಬಸವ ಪಟ್ಟದ್ದೇವರ" (೨೦೦೬) ಹೈದ್ರಾಬಾದ ಕರ್ನಾಟಕ ಸಾಂಸ್ಕೃತಿಕ ಪರಿಚಯ ಪುಸ್ತಕಮಾಲೆಯ ೩೩ನೆಯ ಪುಸ್ತಕವಾಗಿದೆ. ಡಾ. ಜಿ.ಬಿ. ವಿಸಾಜಿ ಅವರು ಜನಸಾಮಾನ್ಯರಿಗೆ ಸರಳ ಭಾಷೆಯಲ್ಲಿ ಮನಮುಟ್ಟುವಂತೆ ಪೂಜ್ಯರ ಜೀವನ ಸಾಧನೆಯನ್ನು ವಿವರಿಸಿದ್ದಾರೆ. ಬೀದರ ಜಿಲ್ಲೆಯ ಔರಾದ ತಾಲ್ಲೂಕಿನ ಕಮಲನಗರ ಗ್ರಾಮದಲ್ಲಿ ಬುಳ್ಳಾ ಮನೆತನಕ್ಕೆ ಸೇರಿದ ರಾಚಪ್ಪಾ ಸಂಗಮ್ಮ ದಂಪತಿಗಳಿಗೆ ಕ್ರಿ.ಶ. ೨೨-೧೨-೧೮೯೦ ರಲ್ಲಿ ಪೂಜ್ಯರು ಜನಿಸುತ್ತಾರೆ. ಐದು ವರ್ಷದಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡು ಪರದೇಶಿಯಾಗುತ್ತಾರೆ. ಮುಧೋಳು ಸಂಸ್ಥಾನದ ಪಟ್ಟಾಧ್ಯಕ್ಷರಾದ ಶ್ರೀ ಶಿವಲಿಂಗ ಸ್ವಾಮಿಗಳು ಆಶ್ರಯ ನೀಡಿ ಶಿಕ್ಷಣ ಕಲಿಯಲು ಅವಕಾಶ ಮಾಡಿಕೊಡುತ್ತಾರೆ. ಪೂಜ್ಯರು ಕೆದರ ಗಳೆಂಗಳೆಪ್ಪ ಶಾಲೆಯಲ್ಲಿ ಕಲಿಯುತ್ತಾರೆ. ಮುಂದೆ ಶಿವಯೋಗ ಮಂದಿರಕ್ಕೆ ಹೋಗಿ ಹಾನಗಲ ಶ್ರೀಗಳವರ ಪ್ರೀತಿಯ ಶಿಷ್ಯರಾಗುತ್ತಾರೆ. ಅಲ್ಲಿ ಯೋಗ, ವಚನ, ಸಂಸ್ಕøತ, ಶತಕಗಳು ಅಭ್ಯಾಸ ಮಾಡುತ್ತಾರೆ.

ಇವರ ಪಟ್ಟಾಭಿಷೇಕ ಕ್ರಿ.ಶ. ೧೯೨೪ ಫೆಬ್ರುವರಿಯಲ್ಲಿ ನೆರವೇರುತ್ತದೆ. ಆಂಧ್ರಪ್ರದೇಶದ ಮೋರಗಿಯಲ್ಲಿ ೧೯೩೬ರಲ್ಲಿ ಶಾಂತಿವರ್ಧಕ ಗುರುಕುಲ ಆಶ್ರಮ ಪ್ರಾರಂಭಿಸುತ್ತಾರೆ. ಬಡ ಮಕ್ಕಳಿಗೆ ಉಚಿತ ಅನ್ನ ದಾಸೋಹದ ವ್ಯವಸ್ಥೆ ಮಾಡುತ್ತಾರೆ. ಕನ್ನಡ ಕಲಿಕೆಗೆ ಒತ್ತು ಕೊಡುತ್ತಾರೆ. ರಜಾಕಾರರ ಹಾವಳಿಯಲ್ಲಿಯು ವಿದ್ಯಾರ್ಥಿಗಳನ್ನು ಮಹಾರಾಷ್ಟ್ರಕ್ಕೆ ಕರೆದುಕೊಂಡು ಹೋಗಿ ಅವರ ಶಿಕ್ಷಣ ಮುಂದುವರೆಸುತ್ತಾರೆ. ಕ್ರಿ.ಶ. ೧೯೬೪ರಲ್ಲಿ ಭಾಲ್ಕಿಯಲ್ಲಿ ಚನ್ನಬಸವೇಶ್ವರ ಕಲಾ ಮಹಾವಿದ್ಯಾಲಯ ಪ್ರಾರಂಭಿಸುತ್ತಾರೆ. ಅವರು ಸ್ಥಾಪಿಸಿದ ಶಾಂತಿವರ್ಧಕ ಶಿಕ್ಷಣ ಸಂಸ್ಥೆ ಇಂದು ಹೆಮ್ಮರವಾಗಿ ಬೆಳದಿದೆ. ೧೯೫೫ಮೇ ತಿಂಗಳಲ್ಲಿ ಗೋದಾವರಿ ನದಿ ತೀರದ ದೇಗಲೂರ ಪಟ್ಟಣದಲ್ಲಿ ಬೀದರ ಜಿಲ್ಲಾ ಕನ್ನಡಿಗರ ಸಮ್ಮೇಳನ ಪೂಜ್ಯರು ಸಂಘಟಿಸಿದ್ದಾರೆ. ಪೂಜ್ಯರ ಪ್ರಸಾದನಿಲಯದ ವಿದ್ಯಾರ್ಥಿ ಶಾಂತರಸರು ಕರ್ನಾಟಕ ರಾಜ್ಯದ ಶ್ರೇಷ್ಠ ಸಾಹಿತಿಯಾಗಿ ಬೆಳೆದಿದ್ದಾರೆ. ಅವರಿಗೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಲಾಗಿದೆ. ಗುಲಬರ್ಗಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ ಪದವಿ ನೀಡಿ ಸತ್ಕರಿಸಿದೆ.

ಡಾ. ಚನ್ನಬಸವ ಪಟ್ಟದ್ದೇವರು ಬಸವಕಲ್ಯಾಣದಲ್ಲಿರುವ ಅನುಭವ ಮಂಟಪದ ನವ ನಿರ್ಮಾಪಕರಾಗಿದ್ದಾರೆ. ಪೂಜ್ಯರು ದಲಿತೋದ್ದಾರಕರು, ಸ್ತ್ರೀಯರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಏಳಿಗೆಗಾಗಿ ಶ್ರಮಿಸಿದ್ದಾರೆ. ಸಮಾಜವೇ ತನ್ನ ಮನೆ, ಭಕ್ತರು ತನ್ನ ಬಳಗ ಎಂದು ನುಡಿಯುತ್ತಿದ್ದರು. ಸರಳ ವಿವಾಹಗಳಿಗೆ ಉತ್ತೇಜನ ನೀಡಿದ್ದಾರೆ. ಅನೇಕ ಸಂಘ-ಸಂಸ್ಥೆಗಳವರು ಪೂಜ್ಯರಿಗೆ ಸನ್ಮಾನ ಪತ್ರವನ್ನಿತ್ತು ಸತ್ಕರಿಸಿವೆ. ಶ್ರೀ ಶಾಂತರಸರ ಪ್ರಧಾನ ಸಂಪಾದಕತ್ವದಲ್ಲಿ "ಕಾಯಕ ಪರಿಣಾಮಿ" ಅಭಿನಂದನಾ ಗ್ರಂಥ ಅರ್ಪಿಸಲಾಗಿದೆ. ಇದು ಅತ್ಯುತ್ತಮ ಆಕರ ಗ್ರಂಥವಾಗಿದೆ. ಡಾ. ಚನ್ನಬಸವ ಪಟ್ಟದ್ದೇವರು ಓರ್ವ ವ್ಯಕ್ತಿಯಾಗಿರದೆ ನಾಡಿನ ಶಕ್ತಿಯಾಗಿದ್ದಾರೆ. ದಿವ್ಯ ಚೈತನಿಯಾಗಿದ್ದಾರೆ. ಪೂಜ್ಯರು ಶತಾಯುಷಿಗಳಾಗಿದ್ದು ದಿನಾಂಕ ೨೨/೦೪/೧೯೯೯ರಂದು ಲಿಂಗೈಕ್ಯರಾದರು.

ಡಾ. ಜಿ.ಬಿ. ವಿಸಾಜಿ ಅವರ "ಹರಿಹರ" (೨೦೦೭) ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಸರಸ್ವತಿ ಗೋದಾಮ ಅವರಿಂದ ಪ್ರಕಟವಾಗಿದೆ. ಡಾ. ಜಿ.ಬಿ.ವಿಸಾಜಿ ಅವರು ಹರಿಹರ ಕುರಿತು ಆಳವಾದ ಅಧ್ಯಯನ ಕೈಗೊಂಡಿದ್ದು ಸಮಗ್ರ ಜೀವನ ಸಾಹಿತ್ಯದ ಸಾಧನೆಯನ್ನು ಹೃದಯಂಗಮವಾಗಿ ವಿವರಿಸಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಹರಿಹರ ಕವಿ ಶ್ರೇಷ್ಠ ಕವಿಯಾಗಿದ್ದು ಮಹಾಕ್ರಾಂತಿಯನ್ನು ಎಸಗಿದ್ದಾನೆ. ಈತನು ಹಂಪಿಯ ಪುಣ್ಯ ಕ್ಷೇತ್ರದ ಶಿಶು ಆತನ ತಂದೆ ತಾಯಿಗಳು ಮಹಾದೇವ ಮತ್ತು ಶರವಾಣಿಯರು, ರುದ್ರಾಣಿ ಹರಿಹರನ ಅಗ್ರಜೆ. ರಾಘವಾಂಕನು ಹರಿಹರನ ಸೋದರಳಿಯನು. ಹರಿಹರನಿಗೆ "ರಸಿಕ ಚಕ್ರಿ" "ಕವಿ ಚಕ್ರವರ್ತಿ", "ಯತಿಪತಿ", ಮುಂತಾದವುಗಳು ಬಿರುದುಗಳಿದ್ದವು. ಹರಿಹರನು ಪರಮ ವೈರಾಗ್ಯ ಮೂರ್ತಿಯಾಗಿದ್ದನು. ಹರಿಹರನು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಸೀಮಾಪುರುಷನಾಗಿದ್ದಾನೆ. ಆತನು ಕನ್ನಡ ಸಾಹಿತ್ಯದಲ್ಲಿ ಕಾವ್ಯದ ಉದ್ದೇಶ, ವಸ್ತು, ಹಾಗೂ ಶೈಲಿಗಳ ವಿಷಯವಾಗಿ ಕ್ರಾಂತಿಯ ಧೀರ ಹೆಜ್ಜೆಯನ್ನು ಇಟ್ಟಿದ್ದಾನೆ. ಶಿವಭಕ್ತರೆಲ್ಲರು ಹರಿಹರನ ದೃಷ್ಟಿಯಲ್ಲಿ ಎಲ್ಲರು ಸಮಾನರಾಗಿದ್ದಾರೆ. ಹರಿಹರನು "ಗಿರಿಜಾ ಕಲ್ಯಾಣ" ವೈಶಿಷ್ಟ್ಯಪೂರ್ಣವಾದ ಚಂಪು ಗ್ರಂಥ ರಚಿಸಿದ್ದಾನೆ. ಈ ಕಾವ್ಯದ ಮೂಲಕ ಹರಿಹರನು ಒಬ್ಬ ಪಾಂಡಿತ್ಯ ಕವಿ ಎಂದು ತೋರಿಸಿಕೊಟ್ಟಿದ್ದಾನೆ.

ಹರಿಹರನು ರಗಳೆಗಳನ್ನು ರಚಿಸಿದ ಮೊದಲ ಕವಿಯಾಗಿದ್ದಾನೆ. "ಶಿವಗಣದ ರಗಳೆಗಳು" ಈತನ ವ್ಯಕ್ತಿತ್ವ ಸಿದ್ಧಿಯ ಪತಾಕೆಗಳಾಗಿವೆ. ಈತನ "ಬಸವರಾಜದೇವರ ರಗಳೆ" ಶ್ರೇಷ್ಠ ಕೃತಿಯಾಗಿದೆ. "ನಂಬಿಯಣ್ಣನ ರಗಳೆ" ಮಹತ್ವದ ಕೃತಿಯಾಗಿದೆ. "ಕುಂಬಾರ ಗುಂಡಯ್ಯನ ರಗಳೆ" ಇದರಲ್ಲಿ ಭಕ್ತರೊಡನೆ ಶಿವನು ಕುಣಿಯುವ ದೃಶ್ಯ ಅಮೋಘವಾಗಿದೆ. ಕುಂಬಾರ ಗುಂಡಯ್ಯನ ಕುಣಿತ ವಿಶ್ವಲಾಸ್ಯವಾಗಿದೆ. ಹರಿಹರನು ಬೇಡರ ಕಣ್ಣಪ್ಪ, ಮಾದಾರ ಚನ್ನಯ್ಯ, ಅವರಂತಹ ಜನ ಸಾಮಾನ್ಯರನ್ನು ಕಥಾ ನಾಯಕರನ್ನಾಗಿ ಮಾಡಿಕೊಂಡು ಕಾವ್ಯ ಬರೆದ ಮೊದಲ ಕವಿಯಾಗಿದ್ದಾನೆ. "ಕಾರಿಕಾಲಮ್ಮೆಯ ರಗಳೆ", "ರೇವಣಸಿದ್ದೇಶ್ವರ ರಗಳೆ", "ಪುಷ್ಪ ರಗಳೆ" ಮುಂತಾದವು ವಿಶಿಷ್ಟವಾಗಿವೆ. ಹರಿಹರನ ರಗಳೆಗಳು ಭಕ್ತಿಯ ವೈವಿಧ್ಯವನ್ನು ಸೂಚಿಸುತ್ತವೆ.

ಹರಿಹರನ ಶತಕಗಳು ಭಕ್ತಿ ಪ್ರಧಾನವಾಗಿವೆ. "ರಕ್ಷಾ ಶತಕ" ಮತ್ತು "ಪಂಪಾಶತಕ", "ಖ್ಯಾತ ಕರ್ನಾಟಕ ವೃತ್ತಗಳಲ್ಲಿ" ಬರೆಯಲಾಗಿದೆ. ಇವು ಉತ್ಕಟ ಭಕ್ತಿಭಾವಕ್ಕೆ ಮತ್ತು ಶಕ್ತಿಯುತ ವಾಣಿಗೆ ಸಾಕ್ಷಿಯಾಗಿವೆ. ಹರಿಹರನು "ಅಷ್ಟಕ" ಪ್ರಕಾರವನ್ನು ಕನ್ನಡದಲ್ಲಿ ಬಳಸಿ ತನ್ನ ಹಿರಿಮೆಗರಿಮೆಗಳನ್ನು ಮೆರೆದಿದ್ದಾನೆ. "ಮುಡಿಗೆ ಅಷ್ಟಕ"ದಲ್ಲಿ ಶಿವಾದೀಕ್ಷೆಯನ್ನು ತಿಳಿಸುವ ಎಂಟು ಪದ್ಯಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಸಂಸ್ಕೃತ ಪದಗಳ ಹೆಚ್ಚಳವಿದೆ. ಇವು

“ಕ್ಷ”ಕಾರ ಪ್ರಾಸದಿಂದ ಕೂಡಿದೆ. ಹರಿಹರನು ಕನ್ನಡದ ಮಹಾಕವಿಗಳಲ್ಲಿ ಒಬ್ಬನಾಗಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ವ್ಯಕ್ತಿತ್ವದ ಸಂಪತ್ತು ಮತ್ತು ಸಾಹಿತ್ಯ ಸಂಪತ್ತಿನಿಂದ ಕೂಡಿ “ಹರಿಹರ ಮಾರ್ಗ” ನಿರ್ಮಾಣ ಮಾಡಿದ್ದಾನೆ.

ತುಮಕೂರು ಸಿದ್ಧಗಂಗಾ ಮಠದ ಪೂಜ್ಯ ಶತಮಾನೋತ್ಸವದ ಅಂಗವಾಗಿ ಡಾ. ಜಿ.ಬಿ. ವಿಸಾಜಿ ಅವರ “ಪೂಜ್ಯ ಚನ್ನಬಸವ ಪಟ್ಟದ್ದೇವರ” ಗ್ರಂಥ ಮುದ್ರಿತವಾಗುತ್ತಿದೆ. ಈ ಕೃತಿಯಲ್ಲಿ ಪೂಜ್ಯ ಚನ್ನಬಸವ ಪಟ್ಟದ್ದೇವರ ಬಾಲ್ಯದಿಂದ ಇಲ್ಲಿಯವರೆಗಿನ ಸಮಗ್ರ ಚಿತ್ರಣವನ್ನು ಕೊಡಲಾಗಿದೆ. ಜೀವನ ಚರಿತ್ರೆಗೆ ಸಂಬಂಧಿಸಿದ ಡಾ. ಜಿ.ಬಿ. ವಿಸಾಜಿ ಅವರ ಅನೇಕ ಲೇಖನಗಳು ವಿವಿಧ ಗ್ರಂಥಗಳಲ್ಲಿ ಸೇರ್ಪಡೆಯಾಗಿವೆ. ಶ್ರೀ ಬಿ.ಡಿ. ಜತ್ತಿ ಅವರ “ಸಂಭಾವನಾ ಗ್ರಂಥ” (೧೯೭೫) “ಕರ್ತಾರ”ದಲ್ಲಿ “ಬೀದರ ಜಿಲ್ಲೆ ಮತ್ತು ಬಿ.ಡಿ. ಜತ್ತಿ” ಲೇಖನ ಬರೆದಿದ್ದಾರೆ. ವೀರಶೈವ ಪುಣ್ಯ ಪುರುಷರು ಸಂಪುಟ–೨ (೧೯೮೫) ರಾಯಕಾಶಿರಾಯ ದೇಶಮುಖ ಭಾಲ್ಕಿ ಲೇಖನ ಬರೆದಿದ್ದಾರೆ. “ಚೇತನ ಶಿಲ್ಪಿ” (೨೦೦೫) ಗ್ರಂಥದಲ್ಲಿ ಕನ್ನಡದ ಕಳಕಳಿಯ ಶ್ರೀ ಶಾಂತಪ್ಪ ದೇವರಾಯ ಲೇಖನ ಬರೆದಿದ್ದಾರೆ. “ಬಸವಾಮೃತ” (೧೯೯೬) ದಲ್ಲಿ “ಬಸವಾಭಿಮಾನಿ ಡಾ. ಬಿ.ವ್ಹಿ. ಪಾಟೀಲ” ಲೇಖನವನ್ನು ಡಾ. ಜಿ.ಬಿ. ವಿಸಾಜಿ ಅವರು ಬರೆದಿದ್ದಾರೆ. “ಚನ್ನಬಸವ ಕಲ್ಯಾಣ” (೨೦೦೬) ಸ್ಮರಣ ಸಂಚಿಕೆಯಲ್ಲಿ “ಭುವನದ ಭಾಗ್ಯ ಚನ್ನಬಸವ ಪಟ್ಟದ್ದೇವರು” ಲೇಖನ ಡಾ. ಜಿ.ಬಿ. ವಿಸಾಜಿ ಅವರು ಬರೆದಿದ್ದಾರೆ. “ಕನ್ನಡ ಸಾಹಿತ್ಯಕ್ಕೆ ಹೈದ್ರಾಬಾದ ಕರ್ನಾಟಕದ ಮುಸ್ಲಿಂ ತತ್ವಪಾದಕಾರರ ಕೊಡುಗೆ (೨೦೦೦) ಗ್ರಂಥದಲ್ಲಿ “ಕೊಳ್ಳೂರು ಹುಸನಾಸಾಹೇಬರು” ಲೇಖನವನ್ನು ಡಾ. ಜಿ.ಬಿ. ವಿಸಾಜಿ ಅವರು ಬರೆದಿದ್ದಾರೆ. “ಷಡಕ್ಷರ” (೨೦೦೧) ಅಭಿನಂದನಾ ಗ್ರಂಥದಲ್ಲಿ ನಿಜಾಮರ ಆಳ್ವಿಕೆಯಲ್ಲಿ ಕನ್ನಡ ಕಟ್ಟಿದ ಸಂಗ್ರಾಮಪ್ಪನವರು ಗ್ರಂಥ ಡಾ. ಜಿ.ಬಿ. ವಿಸಾಜಿ ಅವರು ಬರೆದಿದ್ದಾರೆ. “ವಿವಿಧ ಭಕ್ತರ ದೃಷ್ಟಿಯಲ್ಲಿ ಶ್ರೀ ಶಿವಯೋಗಿಶ್ವರ ಸ್ವಾಮಿಗಳು” ಎಂಬ ಲೇಖನವನ್ನು ಬರೆದಿದ್ದಾರೆ. “ಬಸವಶಿಸು” (೨೦೦೨) ಗ್ರಂಥದಲ್ಲಿ “ಶಿಕ್ಷಣ ಪ್ರೇಮಿ ಪೂಜ್ಯ ಬಸವಲಿಂಗ ಪಟ್ಟದ್ದೇವರು” ಲೇಖನವನ್ನು ಡಾ. ಜಿ.ಬಿ. ವಿಸಾಜಿ ಅವರು ಬರೆದಿದ್ದಾರೆ. “ಗುರುಮೈತ್ರಿ” (೨೦೦೬) ಗ್ರಂಥದಲ್ಲಿ ಡಾ. ಜಿ.ಬಿ. ವಿಸಾಜಿ ಅವರು “ಅನುಭವ ಪದಗಳ ಕೋಗಿಲೆ ಶರಣೆ ಮೈತ್ರಾದೇವಿ” ಲೇಖನವನ್ನು ಬರೆದಿದ್ದಾರೆ. “ಬಸವಯೋಗಿ” (೨೦೦೬) ಅಭಿನಂದನಾ ಗ್ರಂಥದಲ್ಲಿ “ಶ್ರೀ ಶಿವಾನಂದ ಮಹಾಸ್ವಾಮಿಗಳು” ಕುರಿತು ಡಾ. ಜಿ.ಬಿ. ವಿಸಾಜಿ ಅವರು ಬರೆದಿದ್ದಾರೆ. “ಗುರುಪುತ್ರ” (೨೦೦೨) ಗ್ರಂಥದಲ್ಲಿ “ಅಂಬಲಿದಾಸೋಹಿ ಶರಣ ಜಿ.ಎಚ್. ಶಿವಮಠ” ಎಂಬ ಲೇಖನ ಬರೆದಿದ್ದಾರೆ. “ಶಬ್ದಾಂಜಲಿ” (೨೦೦೧) ಗ್ರಂಥದಲ್ಲಿ “ಸ್ನೇಹದ ಹಾ.ಮಾ.ನಾ” ಲೇಖನ ಬರೆದಿದ್ದಾರೆ ಇನ್ನು ಅನೇಕ ಜೀವನ ಚರಿತ್ರೆಯನ್ನು ಕುರಿತ ಲೇಖನಗಳು

ಪತ್ರಿಕೆಗಳಲ್ಲಿಯು ಮಸ್ತಕಗಳಲ್ಲಿಯು ಪ್ರಕಟವಾಗಿವೆ. ಸೇಡಂ ಕೊತ್ತಲ ಬಸವೇಶ್ವರ ಶಿಕ್ಷಣ ಸಂಸ್ಥೆಯಿಂದ ರಾಯಕಾಶಿರಾಯ ದೇಶಮುಖ ಮಸ್ತಕ ಶೀಘ್ರದಲ್ಲಿಯೇ ಪ್ರಕಟವಾಗುತ್ತಲಿದೆ.

**೩) ಸಂಪಾದನ ಸಾಹಿತ್ಯ :**

ಡಾ. ಜಿ.ಬಿ.ವಿಸಾಜಿ ಅವರು ಸಂಪಾದನ ಸಾಹಿತ್ಯ ಕೂಡ ನಿರ್ಮಾಣಮಾಡಿದ್ದಾರೆ. ೧೯೬೬ರಲ್ಲಿಯೇ ಗೆಳೆಯರ ಬಳಗ ಕೋಹಿನೂರ ವತಿಯಿಂದ ನೆಲದನುಡಿ–೧ ಮಸ್ತಕವನ್ನು ಸಂಪಾದಿಸಿದ್ದಾರೆ. ಇದನ್ನು ಬಸವಕಲ್ಯಾಣದ ನೂತನ ತಾಲ್ಲೂಕ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾದ ಶ್ರೀ ಮಾಧವರಾವ ಪಾಟೀಲ ಕೋಹಿನೂರ ಅವರಿಗೆ ಅರ್ಪಿಸಲಾಗಿದೆ. ಇದರಲ್ಲಿ ೧೭ ಲೇಖನಗಳಿವೆ. ಈ ಮಸ್ತಕದ ಮೊದಲಿಗೆ ಡಾ.ಜಿ.ಬಿ.ವಿಸಾಜಿ ಅವರು ತಮ್ಮ ನಿಲುವನ್ನು ಕಾವ್ಯಾನಂದರ ಸಾಲುಗಳಿಂದ ಘೋಷಿಸಿಕೊಂಡಿದ್ದಾರೆ. "ನಾನ ನಿಸರ್ಗದ ಭೇರಿ, ಕಾನನದ ತೂತ್ತೂರಿ, ನಾನು ನಡೆದುದೇ ದಾರಿ"[೨೨] ಇದು ಅವರು ಬೆಳೆದುಬಂದ ವ್ಯಕ್ತಿತ್ವವನ್ನು ಸೂಚಿಸುತ್ತದೆ. ಈ ಮಸ್ತಕದಲ್ಲಿ ಕೊಳ್ಳೂರು ಹುಸನಾಸಾಹೇಬರ ಪದಗಳನ್ನು ಪ್ರಪ್ರಥಮ ಬಾರಿಗೆ ಸಂಗ್ರಹಿಸಿ ಪ್ರಕಟಿಸಲಾಗಿದೆ. ಗೆಳೆಯರ ಬಳಗದ ಸಂಘಟನೆ ಅದರ ಅವಶ್ಯಕತೆ ಸಂಘದ ಗೊತ್ತುಗುರಿಗಳು, ಸಂಘದ ಮಸ್ತಕಗಳ ಪಟ್ಟಿ, ಸದಸ್ಯರ ಪಟ್ಟಿ ಮಸ್ತಕ, ಸಭೆಯ ಕಾರ್ಯಕಲಾಪ ಮಸ್ತಕ, ಜಮಾ ಖರ್ಚಿನ ಮಸ್ತಕ, ಪಾವತಿಮಸ್ತಕ, ಸಾಮಾನುಗಳ ಮಸ್ತಕ, ಸಂದರ್ಶಕರ ಅಭಿಪ್ರಾಯ ಮತ್ತು ಸಲಹಾ ಮಸ್ತಕಗಳನ್ನು ಹೇಗೆ ವ್ಯವಸ್ಥಿತವಾಗಿ ಇಡಬೇಕೆಂಬುದು ಜಿ.ಬಿ. ವಿಸಾಜಿ ಅವರು ವಿವರವಾದ ಲೇಖನ ಬರೆದಿದ್ದಾರೆ. ಈ ಲೇಖನದ ಉಪಯುಕ್ತತೆಯನ್ನು ತಿಳಿದು ವಿಶ್ವಕಲ್ಯಾಣ ಪತ್ರಿಕೆಯ ಸಂಪಾದಕರಾದ ಬಿ. ಮಹಾದೇವಪ್ಪ ಅವರು ಅದನ್ನು ಮರುಮುದ್ರಿಸಿದ್ದಾರೆ. ಇದೇ ಮಸ್ತಕದಲ್ಲಿನ "ದಿವಗಂತ ಮಾಸ್ತರ ಹುಸನಾ ಸಾಹೇಬರು" ಈ ಲೇಖನವನ್ನು ಓದಿದ ಡಾ. ಎಂ.ಎಸ್. ಲಠ್ಠೆ ಅವರು ತಮ್ಮ "ಜನಪದ ಕವಿಚರಿತೆ" ಮಸ್ತಕ ಬರೆಯಲು ಆಕರವಾಗಿ ಸ್ವೀಕರಿಸಿದ್ದಾರೆ. ಈ ಮಸ್ತಕ ಬೀದರ ಜಿಲ್ಲೆಯ ಕನ್ನಡದ ಪ್ರಕಟಿತ ಮಸ್ತಕಗಳಲ್ಲಿ ಮೊದಲನೆಯದಾಗಿದೆ. ಇದರಿಂದ ಅನೇಕ ಉದಯೋನ್ಮುಖ ಬರಹಗಾರರಿಗೆ ಹಾಗೂ ಜನಪದ ಕವಿಗಳಿಗೆ ಪ್ರೋತ್ಸಾಹ ದೊರಕಿದೆ.

ಈ ನೆಲದನುಡಿ–೧ ಮಸ್ತಕವನ್ನು ಓದಿ "ವಿಶ್ವಕಲ್ಯಾಣ" ಯಾದಗಿರಿ (೧೯೬೬) ಪತ್ರಿಕೆಯಲ್ಲಿ ಮಕ್ಕಳ ಕವಿ ಎ.ಕೆ. ರಾಮೇಶ್ವರ ಅವರು "ಎಲ್ಲಿಯೂ ಕಾಣಸಿಗದ ಗೆಳೆಯರ ಬಳಗ" ಒಂದು ಬೀದರ ಜಿಲ್ಲೆಯ ಬಸವಕಲ್ಯಾಣ ತಾಲ್ಲೂಕಿನ ಕೋಹಿನೂರಿನಲ್ಲಿ ಮೈವೆತ್ತು ರಚನಾತ್ಮಕ ಕಾರ್ಯಗಳ ಅಂಗವಾದ ಸಾಹಿತ್ಯ ಪ್ರಕಟಣೆ "ನೆಲದನುಡಿ"ಯ ಮೂಲಕ ಕೈಕೊಂಡಿದ್ದು ತೀರ ಅಭಿನಂದನೀಯವಾಗಿದೆ. ಇಂತಹ ಕೆಲಸ ಸುಲಭ ಸಾಧ್ಯವೆ ಅಲ್ಲ ನೆಲದನುಡಿಯಲ್ಲಿ ಪ್ರಕಟವಾದ ಗೆಳೆಯರ ಬಳಗ ಲೇಖನವನ್ನು ನೋಡಿದರೆ ಕೋಹಿನೂರಿನ ಗೆಳೆಯರ ಬಳಗ ಭದ್ರಬುನಾದಿಯ ಮೇಲೆ ಸ್ಥಾಪಿತವಾಗಿದೆ ಎನಿಸುತ್ತದೆ. ಇಂತಹ ಬಳಗಗಳು ಎಲ್ಲೆಡೆಯು

ಕಾಣಿಸಿಕೊಳ್ಳಲಿ. ಈ ನಿಟ್ಟಿನಲ್ಲಿ ಕೋಹಿನೂರು ಧ್ರುವರತ್ನವಾಗಲಿ ಎಂದು ಅಪೇಕ್ಷಿಸುತ್ತೇನೆ'' ಎಂದು ಮಕ್ಕಳ ಕವಿಯವರು ಬರೆದಿದ್ದಾರೆ. ಇದರಲ್ಲಿ ಧಾರವಾಡದಲ್ಲಿ ಓದುತ್ತಿದ್ದ ಗೆಳೆಯ ಬಿ.ಬಿ. ಹಿರೇಮಠ ಅವರ ಔರಾದಿ ಅಮರೇಶ್ವರರ 'ದಿವ್ಯಜ್ಯೋತಿ' ಎಂಬ ಲೇಖನ ಸ್ಥಳ ಪರಿಚಯವನ್ನು ಮಾಡಿಕೊಡುತ್ತದೆ. ಕಲಾವತಿ ಅಣಕಲ್ ಅವರ ''ನಾನು ಹಕ್ಕಿಯಾದರೆ'' ಎಂಬ ಪ್ರಬಂಧ ಪ್ರಕಟಿಸಲಾಗಿದೆ. ಈಕೆ ಕೋಹಿನೂರ ಗ್ರಾಮದ ಪ್ರಥಮ ಲೇಖಕಿಯಾಗಿದ್ದಾಳೆ. ಅನೇಕ ಜಾನಪದ ಮಹಿಳೆಯರ ಜನಪದ ಗೀತೆಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ. ಡಾ. ಜಿ.ಬಿ. ವಿಸಾಜಿ ಅವರ ಪ್ರಸಿದ್ಧ ಕವನ ''ಅಳಿಗಾಲ-ಉಳಿಗಾಲ'' ಈ ಪುಸ್ತಕದಲ್ಲಿ ಪ್ರಕಟವಾಗಿದೆ. ಇದು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಪುಸ್ತಕ ಪರಿಚಯ ಸಂಪುಟದಲ್ಲಿ ಸೇರಿದೆ. ಇನೊಂದು ಉಪಯುಕ್ತ ಗ್ರಂಥವಾಗಿದೆ.

ಡಾ. ಜಿ.ಬಿ. ವಿಸಾಜಿ ಅವರ ಎರಡನೆ ಗ್ರಂಥ ''ನೆಲದನುಡಿ-೨'' ೧೯೬೭ರಲ್ಲಿ ಪ್ರಕಟವಾಗಿದೆ. ಈ ಪುಸ್ತಕಕ್ಕೆ ಡಾ. ಎಂ.ಎಸ್.ಸುಂಕಾಪುರ ಅವರು ''ಕೊಹಿನೂರ ಗೆಳೆಯರು ಸಾಹಸಿಗಳಾಗಿದ್ದಾರೆ. ಸಾಹಿತಿಗಳು ಸೇರಿಕೊಂಡು ಸಾಹಿತ್ಯ ಪ್ರಸಾದ ಸಿದ್ಧಮಾಡಿ ನೀಡುವ ಸಾಹಸ ನಿಜವಾಗಿಯು ದೊಡ್ಡದು ಅವರ ಪ್ರಯತ್ನದಲ್ಲಿ ವೈವಿಧ್ಯವಿದೆ. ಹೊಸ ರುಚಿ ಕಾಣಿಸುತ್ತದೆ. ಅವರ ಹೆಬ್ಬಯಕೆ ಈಡೇರಲಿ'' ಎಂದು ಹಾರೈಸಿದ್ದಾರೆ. ಈ ಗ್ರಂಥದಲ್ಲಿ ೧೭ಕವನ ಮತ್ತು ಲೇಖನಗಳಿವೆ ಇದರಲ್ಲಿಯ ಜಿ.ಬಿ.ವಿಸಾಜಿ ಅವರು ಬರೆದ ''ಕಲ್ಯಾಣ ಚಾಲುಕ್ಯರಲ್ಲಿದ್ದ ಕನ್ನಡ ಕವಿಗಳು'' ಈ ಲೇಖನವನ್ನು ಡಾ. ರಂ.ಶ್ರೀ. ಮುಗಳಿ ಅವರು ತಮ್ಮ ''ಕನ್ನಡ ಸಾಹಿತ್ಯ ಚರಿತ್ರೆ'' ಗ್ರಂಥದ ಆಕರ ಲೇಖನಗಳಲ್ಲಿ ಸೇರಿಸಿಕೊಂಡಿದ್ದಾರೆ. ಈ ಪುಸ್ತಕದಲ್ಲಿಯ ಶಾಶ್ವತ ಸ್ವಾಮಿ ಮುಕ್ಕುಂದಿಮಠ ಅವರು ಬರೆದ ''ಬಸವಣ್ಣನವರನ್ನು ಕುರಿತ ಅರ್ಜುನವಾಡಾ ಶಾಸನ ಬಹಳ ಪ್ರಮುಖವಾದುದ್ದಾಗಿದೆ. ಬಿ. ಮಹಾದೇವಪ್ಪ ಅವರು ಬರೆದ ''ಎರಡು ಹೆಣ್ಣು-ಎರಡು ಗಂಡು ನಾಟಕ ಓದುಗರ ಮೆಚ್ಚುಗೆಯನ್ನು ಪಡೆದಿದೆ. ಈ ನಾಟಕವನ್ನು ೧೯೬೯ರಲ್ಲಿ ಭಾಲ್ಕಿಯಲ್ಲಿ ಚನ್ನಬಸವೇಶ್ವರ ಮಹಾವಿದ್ಯಾಲಯದ ವಿದ್ಯಾರ್ಥಿಗಳಿಂದ ಅಭಿನಯಿಸಲ್ಪಟ್ಟಿವೆ. ಈ ನಾಟಕವನ್ನು ಡಾ. ಜಿ.ಬಿ. ವಿಸಾಜಿ ಅವರು ನಿರ್ದೇಶಿಸಿದರು. ಈ ಪುಸ್ತಕದಲ್ಲಿ ಕವಿಮಿತ್ರರಾದ ಎ.ಕೃಷ್ಣ ಸುರಪುರ, ಪ್ರಭುಸ್ವಾಮಿ ಮಠ, ಎ.ಎಸ್. ಹಿರೇಮಠ ಮುಂತಾದವರ ಕವನಗಳು ಸೇರಿವೆ. ಇದರಲ್ಲಿ ಸಂಗ್ರಹಿಸಿದ ಜನಪದ ಗೀತೆಗಳನ್ನು ನೋಡಿ ಡಾ. ಎಂ.ಎಸ್. ಲಠ್ಠೆ ಅವರು ''ಕರ್ನಾಟಕ ರಾಜ್ಯದಲ್ಲಿ ಯಾವ ವಿಶ್ವವಿದ್ಯಾಲಯದಲ್ಲೂ ಜಾನಪದ ಅಧ್ಯಯನ ಪ್ರಾರಂಭವಾಗದೆ ಇರುವಾಗ ತಾವು ಜಾನಪದ ಗೀತೆಗಳನ್ನು ಸಂಗ್ರಹಿಸಿ ಅಚ್ಚುಕಟ್ಟಾಗಿ ಮುದ್ರಿಸಿದ್ದಿರಿ. ಈ ಪ್ರಯತ್ನವನ್ನು ತಾವು ಹಾಗೆಯೇ ಮುಂದುವರೆಸಿದರೆ ದೊಡ್ಡ ಜಾನಪದ ಲೇಖಕರಾಗುತ್ತಿದ್ದಿರಿ'' ಎಂದು ನುಡಿದಿದ್ದಾರೆ. ಈ ಪುಸ್ತಕವನ್ನು ನೋಡಿ ಚನ್ನವೀರ ಕಣವಿ ಅವರು ''ಬೀದರ ಜಿಲ್ಲೆಯ ಕೋಹಿನೂರಿನ ಗೆಳೆಯರ ಬಳಗದವರು ನಡೆಯಿಸುತ್ತಿರುವ ಸುಸಂಘಟಿತ ಚಟುವಟಿಕೆಗಳಲ್ಲಿ ಸಾಹಿತ್ಯ ರಂಗವು ಒಂದಾಗಿದೆ. ''ನೆಲದನುಡಿ''ಯ ಮೂಲಕ

ಆ ಭಾಗದ ಲೇಖಕರ ಕಲಾಭಿವ್ಯಕ್ತಿಗೆ ಅವಕಾಶವನ್ನು ಒದಗಿಸಿಕೊಡುವಲ್ಲಿ ಗೆಳೆಯರ ಬಳಗ ಒಂದು ಉತ್ತಮ ಕಾರ್ಯವನ್ನು ಹಮ್ಮಿಕೊಂಡಿದೆ. ಮೊದಲ ಎರಡು ಸಂಚಿಕೆಗಳು ಪ್ರಕಟವಾದ ಲೇಖನಗಳು, ಕವನಗಳು ಆಶಾದಾಯಕವಾಗಿವೆ. ಅವರ ಈ ಸಾಹಸ ಸತ್ವಪೂರ್ಣವಾದ ಸಿದ್ಧಿಯನ್ನು ಪಡೆಯಲೆಂದು ಹಾರೈಸುತ್ತೇನೆ". ಎಂದು ತಿಳಿಸಿದ್ದಾರೆ.

ಈ ನೆಲದನುಡಿಯಲ್ಲಿ ಸತ್ವ, ತತ್ವ, ಕೂಡಿಕೊಂಡ ಗದ್ಯ, ಪದ್ಯ, ನಾಟಕ, ವ್ಯಕ್ತಿ ಪರಿಚಯ ಎಲ್ಲವು ಚಿತ್ತಾಕರ್ಷಕವಾಗಿವೆ. ಹೈದ್ರಾಬಾದ ಕರ್ನಾಟಕದಲ್ಲಿ ಬಹಳ ಜನ ಉತ್ತಮ ಬರಹಗಾರರಿದ್ದಾರೆ. ಅವರೆಲ್ಲರು ಪರಸ್ಪರ ಕೂಡಿ ಒಂದು ಬಳಗ ಕಟ್ಟಬೇಕೆಂದು ಯತ್ನಿಸುತ್ತಿರುವಾಗ ಬೀದರ ಜಿಲ್ಲೆಯ ಕೋಹಿನೂರು ಗೆಳೆಯರು ಒಂದು ಗುಂಪು ಕಟ್ಟಿ ನೆಲದನುಡಿಯ ಮುಖಾಂತರ ನಮಗೆ ಕಾಣಿಸಿಕೊಂಡು ಆದರ್ಶಪ್ರಾಯರಾಗಿದ್ದಾರೆ ಎಂದು ಎ.ಕೆ. ರಾಮೇಶ್ವರ ಅವರು ಯಾದಗಿರದ 'ವಿಶ್ವಕಲ್ಯಾಣ' ಪತ್ರಿಕೆಯಲ್ಲಿ ಬರೆದಿದ್ದಾರೆ.

ಡಾ.ಜಿ.ಬಿ.ವಿಸಾಜಿ ಅವರು ಶಾಂತಿವರ್ಧಕ ಶಿಕ್ಷಣ ಸಂಸ್ಥೆಯ ಚನ್ನಬಸವೇಶ್ವರ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದ ೧೯೭೦-೭೧ರ "ಶಾಂತಿಕಿರಣ" ವಾರ್ಷಿಕ ಪತ್ರಿಕೆಯನ್ನು ಭಾಲ್ಕಿ ಹಿರೇಮಠ ಸಂಸ್ಥಾನದಿಂದ ಮೊದಲಬಾರಿಗೆ ಪ್ರಧಾನ ಸಂಪಾದಕರಾಗಿ ಸಂಪಾದಿಸಿದ್ದಾರೆ. ಇದರಲ್ಲಿ ಕನ್ನಡ ವಿಭಾಗ, ಹಿಂದಿವಿಭಾಗ, ಮರಾಠಿವಿಭಾಗ ಹಾಗೂ ಇಂಗ್ಲೀಷ ವಿಭಾಗಗಳಿದ್ದು ವೈವಿಧ್ಯಪೂರ್ಣ ಲೇಖನ ಮತ್ತು ಕವನಗಳಿವೆ. ಈ ಲೇಖನಗಳನ್ನು ಕಾಲೇಜಿನ ವಿದ್ಯಾರ್ಥಿಗಳು ಹಾಗು ಅಧ್ಯಾಪಕರು ಬರೆದಿರುವರು. ಇದರ ಸಂಪಾದಕೀಯದಲ್ಲಿ ಡಾ. ಜಿ.ಬಿ.ವಿಸಾಜಿ ಅವರು "ಹೈದ್ರಾಬಾದ ಕರ್ನಾಟಕದ ಗಂಡು ಮೆಟ್ಟಿನ ಸ್ಥಳವಾದ ಬೀದರ ಜಿಲ್ಲೆ ಒಂದು ಕಾಲದಲ್ಲಿ ಕನ್ನಡ ಸಾಹಿತ್ಯವನ್ನು ಸುಗ್ಗಿಯ ರೂಪದಲ್ಲಿ ಹೊರಹೊಮ್ಮಿಸಿತು. ವಿದ್ವಾಂಸರ ಕಣ್ಣು ತಪ್ಪಿಸಿ ಅದು ಕುಳಿತಿರುವ ಇಲ್ಲಿನ ಪುರಾತನ ಶಾಸನಗಳು, ತಾಡೋಲೆ ಗ್ರಂಥಗಳು ಇಂದಿನ ಜನತೆಯ ಬಾಯಲ್ಲಿ ನೆಲೆಸುತ್ತಿರುವ ಅಮೂಲ್ಯ ಜಾನಪದ ಸಂಪತ್ತು ಯಾವಾಗ ಬೆಳಕನ್ನು ಕಂಡೆವು ಎಂದು ಹಾರೈಸುವಂತಿವೆ. ಒಬ್ಬ ಸಾಹಿತಿ ದೇಶದ ಅಮೂಲ್ಯ ಆಸ್ತಿ ಸಂಸ್ಕೃತಿಯ ಕಣ್ಣು, ಸಮಾಜದ ತಲೆ, ರಾಷ್ಟ್ರದ ಅಗ್ರನಾಯಕ ಬೆಳೆಯುವ ಸಿರಿ ಮೊಳಕೆಯಲ್ಲಿ ಎನ್ನುವಂತೆ ಬೀದರ ಜಿಲ್ಲೆಯ ಸಾಹಿತ್ಯದ ಕೊರತೆಯನ್ನು ನೀಗಿಸಲೆಂದೇ ಹುಟ್ಟಿಬರುತ್ತಿರುವ ನಮ್ಮ ಜಿಲ್ಲೆಯ ಪ್ರತಿಭಾವಂತ ನವೋದಯ ತರುಣಬರಹಗಾರನ ಸಾಹಿತ್ಯದ ಅಮೃತ ಕಿರಣಗಳು ಈ "ಶಾಂತಿಕಿರಣ"ದಲ್ಲಿ ಪ್ರವಹಿಸಿದರೆ ಆಶ್ಚರ್ಯವಲ್ಲ.

"ವಿದ್ಯಾರ್ಥಿಗಳ ಪ್ರತಿಭೆಯ ಮೂಲ ಸೂತ್ರ. ಅವರ ಬರಹ ಮತ್ತು ಕಲಾ ಪ್ರಯೋಗಗಳ ಪರಿಣತಿ, ಅವರ ಜೀವನದ ರಸನಿಮಿಷಗಳನ್ನು ನೆನಪಿಸಿ ಕೊಡುವ ಪ್ರಯತ್ನ ಇಂದು "ಶಾಂತಿಕಿರಣ"ದ ಮೂಲಕ ಪೂರೈಸಿದೆ. ವಿದ್ಯಾರ್ಥಿ ಬರಹ ಪ್ರಪಂಚದ ವಿಸ್ತಾರ, ವೈವಿದ್ಯ, ಗಹತೆ, ವಿಲಾಸ, ಬೆಡಗು, ಬಿನ್ನಾಣ, ಏರು-ಪೇರು ಮತ್ತು ಓರೆ-ಕೋರೆಗಳನ್ನು ಇಲ್ಲಿ

ಸೆರೆಹಿಡಿಯಲಾಗಿದೆ" ಎಂದು ತಮ್ಮ ಸಂಪಾದಕೀಯದಲ್ಲಿ ಡಾ. ಜಿ.ಬಿ.ವಿಸಾಜಿ ಬರೆದಿದ್ದಾರೆ. ಇದರಲ್ಲಿ ಅಪರೂಪದ ಭಾವ ಚಿತ್ರಗಳಿವೆ. ಕಾಲೇಜಿನ ವಾರ್ಷಿಕ ವರದಿ ಇದಾಗಿದೆ. ಅನೇಕ ಉದಯೋನ್ಮುಖ ಬರಹಗಾರರನ್ನು ಪ್ರಥಮ ಬಾರಿಗೆ ಅವಕಾಶ ನೀಡಿ ಪ್ರೋತ್ಸಾಹಿಸಲಾಗಿದೆ. ಈ ವಾರ್ಷಿಕ ಪತ್ರಿಕೆ ಮುಂದೆ ಬರುವ ಮಹಾವಿದ್ಯಾಲಯದ ವಾರ್ಷಿಕ ಪತ್ರಿಕೆಗಳಿಗೆ ಮಾದರಿಯಾಗಿದೆ. ಇದರಲ್ಲಿ ರಾಮಕೃಷ್ಣ ಸಾಳೆ, ಹೆಡಗಾಪುರ ಇವರಿಂದ ನಾಟಕ ಬರೆಯಿಸಿ ಸಂಗ್ರಹಿಸಲಾಗಿದೆ. ಡಾ.ಜಿ.ಬಿ. ವಿಸಾಜಿ ಅವರ ಪೂಜ್ಯ ಚನ್ನಬಸವ ಪಟ್ಟದ್ದೇವರ ಮೇಲೆ ಬರೆದ ಪ್ರಸಿದ್ಧ ಕವನ "ಸೂರಿದಾವ ಹೂ ಮಳೆ ಕೈಲಾಸದಿಂದ" ಮೊದಲಬಾರಿಗೆ ಪ್ರಕಟಿಸಲಾಗಿದೆ. ಈ ಕವನವನ್ನು ಕನ್ನಡದ ವಿದ್ವಾಂಸರಾದ ಬಿ.ಟಿ. ಸಾಸನೂರ ಮತ್ತು ಶಾಂತರಸ ರಾಯಚೂರು ಅವರು ಬಹಳಷ್ಟು ಮೆಚ್ಚಿ ಪ್ರಶಂಸೆಯ ಮಾತುಗಳನ್ನಾಡಿದ್ದಾರೆ. ಈ ಸಂಚಿಕೆಯನ್ನು ಭಾಲ್ಕಿಯ ಸ್ಥಳೀಯ ಮುದ್ರಣಾಲಯ "ಪ್ರಕಾಶ ಫ್ರಿಂಟಿಂಗ ಪ್ರೆಸ"ದಲ್ಲಿ ಸುಂದರವಾಗಿ ಪ್ರಕಟಿಸಲಾಗಿದೆ. ಲೇಖಕರು ಮುದ್ರಕರು, ಸಂಪಾದಕರು ಎಲ್ಲರು ಮಣ್ಣಿನ ಮಕ್ಕಳೇ ಇಂತಹ ಮಣ್ಣಿನ ಮಕ್ಕಳಿಂದ ಅಪರೂಪವಾದ ಇಂತಹ ಚಿನ್ನದಂತಹ ಕಾರ್ಯನೆರವೇರಿದೆ. ಸಾಹಿತ್ಯ ಪ್ರಕಟಣಾಲೋಕಕ್ಕೆ ಇದರ ಮೂಲಕ ಹೊಸ ಹೊಸ ಹಕ್ಕಿಗಳನ್ನು ಹಾರಿಬಿಡಲಾಗಿದೆ.

"ವಿನಯ ಭಂಡಾರಿ" (೧೯೭೭) ಡಾ. ಜಿ.ಬಿ. ವಿಸಾಜಿ ಅವರ ನಾಲ್ಕನೆ ಸಂಪಾದನೆ ಗ್ರಂಥವಾಗಿದೆ. ಪೂಜ್ಯ ಚನ್ನಬಸವ ಪಟ್ಟದ್ದೇವರನ್ನು ಅವರ ವ್ಯಕ್ತಿತ್ವವನ್ನು ಗುರುತಿಸಿ ಮೊಟ್ಟಮೊದಲನೆಯ ಬಾರಿಗೆ "ವಿನಯ ಭಂಡಾರಿ" ಎಂದು ಹೆಸರಿಸಿದ್ದಾರೆ. ಇದರಲ್ಲಿ ವಿವಿಧ ಬರಹಗಾರರ ಭಾಲ್ಕಿ ಶ್ರೀಗಳನ್ನು ಕುರಿತ ೧೮ ಲೇಖನಗಳಿವೆ. ಶರಣೆ ತಂಗೆಮ್ಮ ಪಾಟೀಲ, ಶರಣ ವ್ಹಿ. ಸಿದ್ಧರಾಮಣ್ಣ, ಶಿವರಾಜ ಕಾಡೋದೆ, (ಪೂಜ್ಯ ಬಸವಲಿಂಗ ಪಟ್ಟದ್ದೇವರು) ಬಾನಾ ಸೋಲಾಪುರೆ, ಶಿವರಾಜ ಜಾಂತೆ, ಬಸವರಾಜ ಭಾಲ್ಕೆ, ರಾಮಕೃಷ್ಣ ಸಾಳೆ, ಸಿ.ಆರ್. ಮದಭಾವಿ, ಬಾಬುವಡ್ಡೆ, ಸುಬ್ಬಣ್ಣ ಅಂಬೆಸಂಗೆ, ಬಸವರಾಜ ಸಂಗಮ, ನವನಾತ ಜಿರೋಭೆ, ವೈಜಿನಾಥ ನೌಬಾದೆ, ಎಂ.ಜಿ. ದೇಶಪಾಂಡೆ, ಸ್ವಾಮಿ ಲಿಂಗಾನಂದರು, ಸೋಮನಾಥ ನುಚ್ಚಾ ಮತ್ತು ಜಿ.ಬಿ. ವಿಸಾಜಿ ಅವರ ಲೇಖನಗಳು ಇದರಲ್ಲಿ ಒಳಗೊಂಡಿವೆ. ಈ ಬಿಡಿ ಬಿಡಿ ಲೇಖನಗಳಲ್ಲಿ ಪೂಜ್ಯ ಚನ್ನಬಸವ ಪಟ್ಟದ್ದೇವರ ಇಡೀ ಜೀವನವನ್ನು ಹಿಡಿದಿಡಲಾಗಿದೆ. ಅವರು ಕೆಸರಿನಲ್ಲಿಯೆ ಕಮಲದಂತಿದ್ದರು ಕಾಯಕಯೋಗಿಗಳಾಗಿದ್ದರು. ಶಾಂತಿಧೂತರಾಗಿದ್ದರು, ವಿನಯಭಂಡಾರಿಗಳಾಗಿದ್ದರು. ತ್ರಿವಿಧ ದಾಸೋಹ ಮೂರ್ತಿಗಳಾಗಿದ್ದರು, ವಿಭೂತಿ ಪುರುಷರಾಗಿದ್ದರು. ಸಮಾಜದ ಸಂಜೀವಿನಿಯಾಗಿದ್ದರು. ಜ್ಞಾನ ಕ್ರಿಯೆಗಳ ಸಂಗಮವಾಗಿದ್ದರು. ಶಿಕ್ಷಣ ಪ್ರೇಮಿಗಳಾಗಿದ್ದರು. ಈ ಭಾಗಕ್ಕೆ ಪರುಷಮಣಿಯಾಗಿದ್ದರು. ಉತ್ತಮ ಸಮಾಜ ನಿರ್ಮಾಣದ ಸಿಂಪಿಗಳಾಗಿದ್ದರು.

ಈ ಗ್ರಂಥದಲ್ಲಿ ಬರೆದ ಶಿವರಾಜ ರಾಚಪ್ಪಾ ಕಾಡೋದೆ ಅವರ ಲೇಖನ ಅತ್ಯುತ್ತಮವಾಗಿದೆ. ಪೂಜ್ಯರ ಅಂತರಂಗವನ್ನು ಈ ಲೇಖಕರು ಪರಕಾಯ ಪ್ರವೇಶ

ಮಾಡಿದಂತೆ ಒಳಹೊಕ್ಕು ನೋಡಿದ್ದಾರೆ. ಈ ಲೇಖಕರು ಮುಂದೆ ಅವರ ಕರಸಂಜಾತರಾಗುತ್ತಾರೆ, ವಾರಸುದಾರರಾಗುತ್ತಾರೆ, ಪೀಠಾಧಿಕಾರಿಗಳಾಗುತ್ತಾರೆ ಎಂಬ ಸೂಕ್ಷ್ಮ ಅಂಶಗಳು ಈ ಲೇಖನದಲ್ಲಿ ಕಂಡುಬರುತ್ತವೆ.

ಶ್ರೀ ಚನ್ನಬಸವ ಪಟ್ಟದ್ದೇವರು ಸ್ತ್ರೀಯರ ಉದ್ದಾರಕ್ಕಾಗಿ ಅನೇಕ ಕಾರ್ಯಗಳನ್ನು ಕೈಕೊಂಡಿದ್ದು ಶಿವರಾಜ ಜಾಂತೆ ಅವರು ಮನ ಮುಟ್ಟುವಂತೆ ಚಿತ್ರಿಸಿದ್ದಾರೆ. ಪ್ರಸಾದ ನಿಲಯದ ವಿದ್ಯಾರ್ಥಿಗಳೊಡನೆ ಪೂಜ್ಯರ ಒಡನಾಟವನ್ನು ಬಸವರಾಜ ಭಾಲ್ಕಿ ಅವರು ಮನಸ್ಸು ಮುಟ್ಟುವಂತೆ ಚಿತ್ರಿಸಿದ್ದಾರೆ. ಶ್ರೀಗಳ ದೈವಶಕ್ತಿ ಕಾಯಕಯೋಗಿ, ನ್ಯಾಯ ನಿಷ್ಠುರಿ ಗುಣಗಳನ್ನು ಬಸವರಾಜ ಸಂಗಮ ಅವರು ಚೆನ್ನಾಗಿ ಗುರುತಿಸಿದ್ದಾರೆ. ಪೂಜ್ಯ ಚನ್ನಬಸವ ಪಟ್ಟದ್ದೇವರಲ್ಲಿ ಭಕ್ತಿ ಜ್ಞಾನ, ವೈರಾಗ್ಯಗಳು ಮುಪ್ಪುರಿಗೊಂಡಿವೆ ಎಂದು ವೈಜಿನಾಥ ನೌಬಾದೆ ಅವರು ತಿಳಿಸಿದ್ದಾರೆ. ಪೂಜ್ಯ ಲಿಂಗಾನಂದ ಸ್ವಾಮಿಗಳು "ನಾನೊಬ್ಬನೆ ಭಕ್ತ ಉಳಿದವರೆಲ್ಲ ಲಿಂಗ ಜಂಗಮರು" ಎಂಬ ಬಸವಣ್ಣನವರ ನುಡಿಯನ್ನು ಪೂಜ್ಯರು ಅಕ್ಷರಶಃ ನಡೆವಲ್ಲಿ ಅನುಷ್ಠಾನ ಗೈದವರಾಗಿದ್ದಾರೆಂದು ಹೇಳಿದ್ದಾರೆ. ಭಾಲ್ಕಿ ಶ್ರೀಗಳು ಬಡವರ ಬಂಧುಗಳಾಗಿದ್ದರು. ಎಂದು ಸೋಮನಾಥ ನುಚ್ಚಾ ಅವರು ತಿಳಿಸಿದ್ದಾರೆ. ಭಾಲ್ಕಿ ಶ್ರೀಗಳು ಭಕ್ತನ ಮನೆಯ ಅಂಗಳವೇ ಕೈಲಾಸ ಎನ್ನುತ್ತಿದ್ದರು. ಎಂದು ಜಿ.ಬಿ.ವಿಸಾಜಿ ಅವರು ತಿಳಿಸಿದ್ದಾರೆ. ಭಾಲ್ಕಿ ಶ್ರೀಗಳು ಸದಾ ತಾವು ಸಮಾಜದ ಸೇವಕರು, ಧರ್ಮದ ಸೇವಕರು ಎಂದು ಅತ್ಯಂತ ವಿನಯದಿಂದ ಹೇಳುವ ಬಾಗಿದ ತಲೆಯ ಮುಗಿದ ಕೈಯ ಶರಣಜ್ಯೋತಿಗಳಾಗಿದ್ದರು.

"ಹರಿಹರ ದೇವನ ನಾಲ್ಕು ರಗಳೆಗಳು" (೧೯೯೨) ಡಾ. ಜಿ.ಬಿ. ವಿಸಾಜಿ ಅವರ ಐದನೆ ಸಂಪಾದನ ಗ್ರಂಥವಾಗಿದೆ. ಇದರಲ್ಲಿ ಹರಿಹರನ ನಾಲ್ಕು ರಗಳೆಗಳು ಇವೆ. ಬೇಡರ ಕಣ್ಣಪ್ಪನ ರಗಳೆ, ಕಾರಿಕಾಲಮ್ಮಯ ರಗಳೆ, ಕೇಶಿರಾಜ ದಣ್ಣಾಯಕ ರಗಳೆ, ಮತ್ತು ಮಾದಾರ ಚನ್ನಯ್ಯ ರಗಳೆ ಈ ಗ್ರಂಥಕ್ಕೆ ದೀರ್ಘ ಪ್ರಸ್ತಾವನೆಯನ್ನು ಬರೆಯಲಾಗಿದೆ. ಹರಿಹರ ಕವಿಯ ಚರಿತ್ರೆ, ಪ್ರತಿಯೊಂದು ರಗಳೆಯ ಸಾರಾಂಶ ಹಾಗೂ ವಿಮರ್ಶೆ ಕೊಟ್ಟಿದ್ದಾರೆ. ಇದು ಬಿ.ಎ. ತೃತೀಯ ವರ್ಷದ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ ವಿದ್ಯಾರ್ಥಿಗಳಿಗೆ ೧೯೯೧-೯೨, ೧೯೯೨-೯೩, ೧೯೯೩-೯೪, ಈ ಅವಧಿಗೆ ಪಠ್ಯಪುಸ್ತಕವಾಗಿ ನೇಮಿಸಲಾಗಿದೆ. ಆಗಿನ ಪಠ್ಯಪುಸ್ತಕ ರಚನಾ ಸಮಿತಿಯ ಮುಖ್ಯಸ್ಥರು ಡಾ. ಮ.ಗು. ಬಿರಾದಾರ ಅವರು ಆಗಿದ್ದರು.

ಈ ಕೃತಿಯನ್ನು ಸಂಪಾದಿಸಲು ಡಾ. ಫ.ಗು. ಹಳಕಟ್ಟಿ, ಎಚ್.ದೇವೀರಪ್ಪ ಹಾಗು ಎಂ.ಎಸ್. ಸುಂಕಾಪುರೆ ಅವರು ಸಂಪಾದಿಸಿದ ಗ್ರಂಥಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಈ ಪುಸ್ತಕದ ಕೊನೆಯಲ್ಲಿ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ಶಬ್ದಕೋಶ ಕೊಡಲಾಗಿದೆ. ಈ ಪುಸ್ತಕ ರಚನೆಗೆ ಹರಿಹರನ ರಗಳೆಗಳು, ಡಾ. ಫ.ಗು. ಹಳಕಟ್ಟಿ ಹಂಪಿಯ ಹರಿಹರದೇವರ "ಶರಣ ಚರಿತ ಮಾನಸಂ" ಸಂ.ಎಚ್.ದೇವೀರಪ್ಪ, ಮಹಾಕವಿ ಹಂಪೆಯ ಹರಿಹರ ದೇವಕೃತ ನೂತನ ಪುರಾತನ ರಗಳೆಗಳು ಸಂ. ಎಂ.ಎಸ್. ಸುಂಕಾಪುರ, ಹರಿಹರನ ಕೃತಿಗಳು ಒಂದು

ಸಂಖ್ಯಾನಿರ್ಣಯ ಹಿರೆಮಲ್ಲೂರ ಈಶ್ವರನ್, ಹಂಪಿಯ ಹರಿಹರ ಡಿ.ಎಲ್. ನರಸಿಂಹಚಾರ, ಸಗರನಾಡಿನ ಶಿವಶರಣರು ವಿ.ಶಿವಾನಂದ, ಹರಿಹರನು ಚಿತ್ರಿಸಿದ ಶಿವಶರಣೆಯರು ಬಿ.ಬಿ. ಹೆಂಡಿ, ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ ಮುಗಳಿ ಮತ್ತು ಮಹಾಕವಿ ಹರಿಹರನ ಕೃತಿಗಳ ಪದಕೋಶ ಡಾ. ಬಸವರಾಜ ಮಲಶೆಟ್ಟಿ ಇವರ ಕೃತಿಗಳನ್ನು ಆಕರ ಗ್ರಂಥಗಳಾಗಿ ಬಳಸಿಕೊಂಡಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಹರಿಹರದೇವನು ಯುಗಪುರುಷನಾಗಿದ್ದಾನೆ. ವೀರಶೈವ ಕವಿಗಳೆಲ್ಲರಿಗು ಹರಿಹರದೇವನು ಪೂಜ್ಯನಾಗಿದ್ದಾನೆ. ಕೆಲವರಿಗೆ ಕಾವ್ಯವಸ್ತುವುವಾಗಿರುವನು. ಆತನು "ಹರಿಹರ ಸಂಪ್ರದಾಯ"ವನ್ನ ಹಾಕಿಕೊಟ್ಟಿದ್ದಾನೆ. ಆತನು ಮಹಾಕವಿಯಾಗಿದ್ದನು. ಆತನಿಗೆ ರಗಳೆಯ ಕವಿ ಎಂದು ಕರೆಯಲಾಗುತ್ತದೆ. ಹೊಸಗನ್ನಡದ ಗದ್ಯ ಹೇಗಿರಬೇಕೆಂಬುದಕ್ಕೆ ಈತನ ಗದ್ಯ ಇಂದಿಗು ಮಾದರಿಯಾಗಿನಿಲ್ಲಬಲ್ಲದು. ತನ್ನ ರಗಳೆಗಳಲ್ಲಿ ಒಂದು ಸ್ಥಲ ಪದ್ಯ ಇನ್ನೊಂದು ಸ್ಥಲ ಗದ್ಯ ಬಳಸಿಕೊಂಡಿದ್ದಾನೆ. ರಗಳೆಗಳಲ್ಲಿ ಎರಡೆರಡು ಪಾದಗಳು ಒಟ್ಟಿಗಿರುತ್ತವೆ. ಇಷ್ಟೆ ಚರಣಗಳು ಇರಬೇಕೆಂಬ ಕಟ್ಟಿಲ್ಲ. ಕಥೆಯ ಓಟಕ್ಕೆ ರಗಳೆಯ ಪ್ರಕಾರ ಉತ್ತಮವಾದುದ್ದಾಗಿದೆ. ಹರಿಹರನು ಜನಸಾಮಾನ್ಯರನ್ನು ಕಥಾನಾಯಕರನ್ನಾಗಿ ಮಾಡಿಕೊಂಡು ಕಾವ್ಯ ಬರೆದ ಮೊದಲ ಕವಿಯಾಗಿದ್ದಾನೆ. ಹರಿಹರನು ಕನ್ನಡ ಸಾಹಿತ್ಯದಲ್ಲಿ ಕಾವ್ಯದ ಉದ್ದೇಶ ಮತ್ತು ವಸ್ತು ಶೈಲಿಗಳ ವಿಷಯವಾಗಿ ಕ್ರಾಂತಿಯ ಧೀರಹೆಜ್ಜೆಯನ್ನು ಇಟ್ಟಿದ್ದಾನೆ. ಪಂಪಾಪತಿ ವಿರೂಪಾಕ್ಷನ ಹರಿಹರ ದೇವನ ಆರಾಧ್ಯದೇವ. ವಿರೂಪಾಕ್ಷ ದೇವಸ್ಥಾನವೇ ಆತನ ಸ್ಥಳ ಭಕ್ತಿಯ ಕವಿಯ ಶಕ್ತಿ ಆತನ ರಗಳೆಗಳು ಭಕ್ತಿಯಿಂದ ಉಕ್ಕಿ ಹರೆದ ಹೋಳುಗಳಾಗಿವೆ. ಭಕ್ತಿ, ನಿಷ್ಠೆ, ಕಾಯಕ, ಛಲ, ಸರ್ವಾರ್ಪಣ ಭಾವಗಳು ಹರಿಹರನು ಮೆಚ್ಚಿಕೊಂಡ ಬಾಳಿನ ಮೌಲ್ಯಗಳಾಗಿವೆ.

ಬೀದರ ಜಿಲ್ಲೆಯ ನಾಲ್ಕನೇಯ ಕನ್ನಡ ಸಾಹಿತ್ಯ ಸಮ್ಮೇಳನದ ಸವಿನೆನಪಿಗಾಗಿ ಚೆಂಬೆಳಕು (೧೯೯೪) ಸಂಚಿಕೆಯನ್ನು ಡಾ.ಜಿ.ಬಿ. ವಿಸಾಜಿ ಅವರು ಸಂಪಾದಿಸಿದ್ದಾರೆ. ಇದರ ಮುಖಪುಟದ ಚಿತ್ರವನ್ನು ಕಲಾವಿದ ಧರ್ಮಗಿರಿ ಗುಲಬರ್ಗಾ ಅವರು ಅರ್ಥಪೂರ್ಣವಾಗಿ ಚಿತ್ರಿಸಿದ್ದಾರೆ. ಈ ಸಂಚಿಕೆಗೆ ರಾಜ್ಯಪಾಲರ ಸಾರ್ವಜನಿಕ ಸಂಪರ್ಕ ಅಧಿಕಾರಿ ಅಜೀಜವುಲ್ಲಾ ಬೇಗ, ಮುಖ್ಯಮಂತ್ರಿ ಅವರ ಸಚಿವಾಲಯದ ಪತ್ರಿಕಾ ವಿಭಾಗದ ವಿಶೇಷ ಕರ್ತವ್ಯ ಅಧಿಕಾರಿ ಶ್ರೀ ಬಿ.ಎನ್.ಎಸ್.ರೆಡ್ಡಿ, ಸಾರಿಗೆ ಸಚಿವ ಶ್ರೀ ಭೀಮಣ್ಣ ಖಂಡ್ರೆ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಜಿ.ನಾರಾಯಣ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಗೊರು ಚನ್ನಬಸಪ್ಪ, ಬೀದರ ಜಿಲ್ಲಾಧಿಕಾರಿ ಶ್ರೀಮತಿ ಕೆ.ರತ್ನಪ್ರಭಾ, ಜಿಲ್ಲಾ ಪಂಚಾಯತ ಬೀದರದ ಮುಖ್ಯ ಕಾರ್ಯನಿರ್ವಾಹಕ ಅಧಿಕರಿಗಳಾದ ಸಂಜೀವಕುಮಾರ ಅವರು ಶುಭ ಸಂದೇಶಗಳನ್ನು ಬರೆದು ಕಳುಹಿಸಿದ್ದಾರೆ. ಈ ಸಂಚಿಕೆಯಲ್ಲಿ ೧೭ ಲೇಖನಗಳಿವೆ. ಬೀದರ ಜಿಲ್ಲೆಯ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ, ಬೀದರ ಜಿಲ್ಲೆಯ ಕನ್ನಡ ಪತ್ರಿಕೆಗಳು, ಬೀದರ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು, ಬೀದರ ಜಿಲ್ಲೆಯ ಕನ್ನಡ ಭಾಷೆ, ಬೀದರ ಜಿಲ್ಲೆಯ ಚಿಟಕಿ ಭಜನೆ ಮತ್ತು ಗಂಗಾಳ ಮಂಟಪ, ಬೀದರ

ಜಿಲ್ಲೆಯ ಕನ್ನಡ ಜನಪದ ಸಾಹಿತ್ಯ ಒಂದು ಪಕ್ಷಿನೋಟ, ಬೀದರ ಜಿಲ್ಲೆಯ ಬುಲಾಯಿ ಹಾಡುಗಳು, ಬೀದರ ಜಿಲ್ಲೆಯ ಭಜನೆ ಪದಗಳು ಒಂದು ಸಮೀಕ್ಷೆ, ಬೀದರ ಜಿಲ್ಲೆಯ ಜನಪದ ವೃತ್ತಿ ಕಲಾವಿದರು, ಬೀದರ ಜಿಲ್ಲೆಯ ಕೋಲಾಟ, ಬೀದರ ಜಿಲ್ಲೆಯಲ್ಲಿ ಕೃಷಿ ಬೆಳವಣಿಗೆ ಬೀದರ ಜಿಲ್ಲೆಯಲ್ಲಿ ಸಹಕಾರಿ ಆಂದೋಲನ, ಬೀದರ ಜಿಲ್ಲೆಯ ಕಥನ ಗೀತೆಗಳು, ಬೀದರ ಜಿಲ್ಲೆಯ ಸಂಗೀತಗಾರರು, ಬೀದರ ಜಿಲ್ಲೆಯ ಬಿದ್ರಿ ಕಲೆ, ಬೀದರ ಜಿಲ್ಲೆಯ ಚಲನಚಿತ್ರ ಮತ್ತು ನಾಟಕ ಕಲಾವಿದರು ಹಾಗು ಸಮ್ಮೇಳನ ಅಧ್ಯಕ್ಷರ ಭಾಷಣ ಪ್ರಪ್ರಥಮ ಬಾರಿಗೆ "ಚೆಂಬೆಳಕು" ಸಂಚಿಕೆಯಲ್ಲಿ ಇಷ್ಟೊಂದು ವೈವಿಧ್ಯಮಯ ಹಾಗು ಅರ್ಥಪೂರ್ಣ ಲೇಖನಗಳನ್ನು ಸಂಪಾದಿಸಲಾಗಿದೆ.

"ಮನುಷ್ಯ ಸುಸಂಸ್ಕೃತನಾಗಬೇಕಾದರೆ ಸಾಹಿತ್ಯ, ಕಲೆ, ಬಹಳ ಮುಖ್ಯ. ಸಾಹಿತ್ಯ ಸಮ್ಮೇಳನ ಯುವ ಬರಹಗಾರರಿಗೆ ಒಂದು ದಾರಿದೀಪವಾಗುವುದು."[೨೩]

ಬೀದರ ನಾಲ್ಕನೆ ಕನ್ನಡ ಸಾಹಿತ್ಯ ಸಮ್ಮೇಳನವು ಪ್ರಪ್ರಥಮವಾಗಿ ಜಿಲ್ಲಾ ಕೇಂದ್ರವನ್ನು ಬಿಟ್ಟು ಭಾಲ್ಕಿಯಲ್ಲಿ ನಡೆದಿದೆ. ಗಡಿನಾಡ ಪ್ರದೇಶದಲ್ಲಿ ಕನ್ನಡ ಅಭಿವೃದ್ಧಿಗಾಗಿ ಇಂತಹ ಸಾಹಿತ್ಯ ಸಮ್ಮೇಳನ ನಡೆಸುವುದು ಅಗತ್ಯವಾದ ಸಂಗತಿಯಾಗಿದೆ. ಇದರಿಂದ ಗ್ರಾಮೀಣ ಜನರಿಗೆ ಭಾಷೆ, ಸಾಹಿತ್ಯಕಲೆಯ ಬಗ್ಗೆ ಅರಿವು ಮೂಡಿಸಲು ಸಹಾಯಕವಾಗುವುದು. ಇದರಿಂದ ಜನತೆಯಲ್ಲಿ ಸಾಮಾಜಿಕ ಅರಿವು ಮೂಡುವುದು. ಯುವಕರು ಸರಿಯಾದ ದಾರಿಯಲ್ಲಿ ಹೋಗಲು ಈ ಒಂದು ಸಮ್ಮೇಳನ ಪ್ರೇರಣೆ ನೀಡುತ್ತದೆ. ಜನರಲ್ಲಿ ಸಾಹಿತ್ಯದ ಬೆಳವಣಿಗೆಯ ಬಗ್ಗೆ ತಿಳುವಳಿಕೆ ಮೂಡುವುದು ಸಮ್ಮೇಳನದಿಂದ ಉನ್ನತ ವಿಚಾರಗಳು ಹೊರಬಂದು ಸಮಾಜದ ಜನರ ಜವಾಬ್ದಾರಿ ಹೆಚ್ಚಿಸಬಹುದು. ಒಳ್ಳೆಯ ನಾಗರಿಕರ ನಿರ್ಮಾಣಕ್ಕೂ ಸಮ್ಮೇಳನ ಕಾರಣವಾಗುವುದು.

ಸಮ್ಮೇಳನದಿಂದ ಕನ್ನಡ ಸಾಹಿತ್ಯದ ಶ್ರೀಮಂತಿಕೆ ಲಾಭ ಎಲ್ಲರಿಗೂ ದೊರೆಯುವುದು ಇದರಿಂದ ಜಿಲ್ಲೆಯ ಸಾಹಿತಿಗಳನ್ನು ಗುರುತಿಸಲು ಸಹಾಯಕವಾಗುವುದು. ಯುವ ಸಾಹಿತಿಗಳಲ್ಲಿ ಸಾಹಿತ್ಯದ ಬಗ್ಗೆ ಅಭಿರುಚಿ ಮೂಡಿಸಲು ಸಹಾಯಕವಾಗುವುದು.

ಬೀದರ ಜಿಲ್ಲೆಯ ಹಲವು ಕ್ಷೇತ್ರಗಳ ಚಿತ್ರಣವನ್ನು ಒಂದೆಡೆ ತರಬೇಕೆಂಬುದು ಈ "ಚೆಂಬೆಳಕು" ಸಂಚಿಕೆಯ ಉದ್ದೇಶವಾಗಿದೆ. ಇತಿಹಾಸ ಅರಿಯದ ಜನ ಇತಿಹಸ ನಿರ್ಮಾಣ ಮಾಡಲಾರರು. ಆದ್ದರಿಂದ ತಮ್ಮತನದ ಅರಿವು ಮೂಡಬೇಕು ತಮ್ಮ ಪರಂಪರೆಯ ತಿಳುವಳಿಕೆ ಮಾಡಿಕೊಳ್ಳಬೇಕು. ಈ ನೆಲದ ಸಂಸ್ಕೃತಿಯನ್ನು ಹೀರಿಕೊಂಡು ವಿಶ್ವಮಾನವರಾಗಿ ಬೆಳೆಯಬೇಕೆಂಬ ವಿಶಾಲ ತಳಹದಿಯನ್ನು ಇಟ್ಟುಕೊಂಡು ಬೀದರ ಜಿಲ್ಲೆಯ ಸಾಧನೆಯನ್ನು ವಿದ್ವತ್ತ ಜನರಿಗೆ, ಸಾಹಿತ್ಯ ಪ್ರಪಂಚಕ್ಕೆ ಈ "ಚೆಂಬೆಳಕು" ಸಂಚಿಕೆಯ ಮೂಲಕ ತಿಳಿಸಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಬೀದರ ಗಂಡುಮೆಟ್ಟಿನ ನೆಲ. ಹೈದ್ರಾಬಾದ ಕರ್ನಾಟಕ ಪ್ರದೇಶದಿಂದ ಇಲ್ಲಿಯ ಜನ ಕನ್ನಡ ಭಾಷೆ, ಸಂಸ್ಕೃತಿಗೆ ಅಪಾರ ಬೆಂಬಲ ನೀಡುತ್ತಲೆ ಬಂದಿದ್ದಾರೆ. ಕನ್ನಡ ಭಾಷೆ ತನ್ನದೆ ಆದ ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ಕಂಪು ಬೀರಿರುವ ಸುಮಧುರ ಭಾಷೆಯಾಗಿದೆ. ಈ ನಾಡಿನ ಸಾಹಿತಿಗಳು ಸಾಹಿತ್ಯ ಲೋಕಕ್ಕೆ ನೀಡಿರುವ ಕೊಡುಗೆ ಅಪಾರವಾದುದ್ದಾಗಿದೆ. ಬಡತನ, ಶ್ರೀಮಂತಿಕೆಯ ಸೊಂಕು ಇಲ್ಲದ ಭಾಷಾ ಭೇದ-ಭಾವ ವಿಲ್ಲದ, ಜಾತಿ ರಹಿತವಾದ ಸಾಹಿತ್ಯಕ್ಕಿರುವ ತನ್ನದೇ ಆದ ಸ್ಥಾನಮಾನಗಳನ್ನು ಬಿಂಬಿಸಲು ಸಾಹಿತ್ಯ ಸಮ್ಮೇಳನದಂತಹ ವೇದಿಕೆಗಳು ಅವಶ್ಯಕವಾಗಿದೆ. ಭಾಲ್ಕಿ ಪಟ್ಟಣ ತನ್ನದೆಯಾದ ಸಾಂಸ್ಕೃತಿಕ ಪರಂಪರೆಯನ್ನು ಪಡೆದಂತಹ ಕ್ಷೇತ್ರವಾಗಿದೆ. ಇಲ್ಲಿನ ಹಿರೇಮಠ ಸಂಸ್ಥಾನದ ಪೂಜ್ಯ ಶ್ರೀ ಚನ್ನಬಸವ ಪಟ್ಟದ್ದೇವರು ಗಡಿಭಾಗದ ಕನ್ನಡದ ರಕ್ಷಾಕವಚವಾಗಿ ಅಹರ್ನಿಶಿ ದುಡಿಯುತ್ತಾ ಬಂದಿದ್ದಾರೆ. ಈ ಸಮ್ಮೇಳನದಿಂದ ಇದರ ಅಂಗವಾಗಿ ಪ್ರಕಟವಗುತ್ತಿರುವ ಈ "ಚೆಂಬೆಳಕು" ನೆನಪಿನ ಸಂಚಿಕೆಯಲ್ಲಿ ಬೀದರ ಜಿಲ್ಲೆಯ ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಸಮಕಾಲೀನ ಸ್ಥಿತಿಗತಿಗಳನ್ನು ಪರಿಚಯಮಾಡಿ ಕೊಡುವಂತಹ ಒಂದು ಸಮರ್ಥ ಸಂಚಿಕೆ ಹೊರಬಂದಿದೆ.

ಈ ಸಂಚಿಕೆಯಲ್ಲಿ ಅಪರೂಪದ ಭಾವಚಿತ್ರಗಳು ಒಳಗೊಂಡಿದೆ. ಈ ಸಂಚಿಕೆಯಲ್ಲಿ ಬಂದಿರುವ ಸಮ್ಮೇಳನ ಅಧ್ಯಕ್ಷರ ಭಾಷಣದಲ್ಲಿ ಬೀದರ ಜಿಲ್ಲೆಯ ಕನ್ನಡ ಸಾಹಿತ್ಯ ನಡೆದು ಬಂದ ದಾರಿಯನ್ನು ವಿವರವಾಗಿ ಗುರುತಿಸಲಾಗಿದೆ. ಬೀದರ ಜಿಲ್ಲೆಯಲ್ಲಿ ಕನ್ನಡಕ್ಕಾಗಿ ನಡೆಯಬೇಕಾದ ಕಾರ್ಯಗಳನ್ನು ಸೂಚಿಸಲಾಗಿದೆ. ಬೀದರ ಜಿಲ್ಲೆಯ ಸಾಹಿತಿಗಳು ನಡೆದ ದಾರಿ ಕಿರಿದು ನಡೆಯಬೇಕಾದುದ್ದು ಹಿರಿದು ಎಂದು ಸೂಚಿಸಲಾಗಿದ್ದು ಇಲ್ಲಿಯ ಬರಹಗಾರರು ಕನ್ನಡ ಸಾಹಿತ್ಯಕ್ಕೆ ಒಂದು ಪಂಥವನ್ನು ನಿರ್ಮಿಸಿಕೊಡಲಾಗಿಲ್ಲ ಜನಪದ ಸಾಹಿತ್ಯ ಪೂರ್ಣಪ್ರಮಾಣದಲ್ಲಿ ಪ್ರಕಟವಾಗಿಲ್ಲ. ಜಿಲ್ಲೆಯಲ್ಲಿ ಆಕಾಶವಾಣಿ ಕೆಂದ್ರ ಸ್ಥಾಪಿಸಲ್ಪಡಬೇಕು. ಕಛೇರಿಗಳಲ್ಲಿ ಕನ್ನಡ ಬಳಕೆ ಕಡ್ಡಾಯವಾಗಬೇಕು. ಬೀದರ ಜಿಲ್ಲೆಯಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡ ಅಧ್ಯಯನ ಕೇಂದ್ರ ಆರಂಭವಾಗಬೇಕು. ಬೀದರ ಜಿಲ್ಲೆಯಲ್ಲಿ ದೂರದರ್ಶನ ಕೇಂದ್ರ ಆರಂಭವಾಗಬೇಕು. ಸಾಹಿತ್ಯಿಕ ಕಮ್ಮಟಗಳು, ಸಾಹಿತ್ಯ ಪ್ರಶಸ್ತಿಗಳು ಹೆಚ್ಚಾಗಬೇಕು. ಕನ್ನಡ ಪುಸ್ತಕಗಳ ಮಾರಾಟ ಕೆಂದ್ರಗಳು ತೆರೆಯಲ್ಪಡಬೇಕು. ಇದರಿಂದ ಕನ್ನಡದ ಬೆಳವಣಿಗೆ ಭರದಿಂದ ಆಗುವುದೆಂದು ಸೂಚಿಸಲಾಗಿದೆ.

ಇಲ್ಲಿಯವರೆಗೂ ಕನ್ನಡ ಸಾಹಿತ್ಯ ಲೋಕಕ್ಕೆ ಅಪರಿಚಿತವಾಗಿದ್ದ ಕೊಳ್ಳೂರ ಹುಸನಾಸಾಹೇಬ (೧೯೧೮) ಅವರ ತತ್ವಪದಗಳನ್ನು ಡಾ. ಜಿ.ಬಿ. ವಿಸಾಜಿ ಅವರು ಮೊದಲ ಬಾರಿಗೆ ಸಂಪಾದಿಸಿಕೊಟ್ಟಿದ್ದಾರೆ. ಈ ಗ್ರಂಥವನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ಪ್ರಕಟಿಸಿದೆ. ಆಗಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಶಾಂತರಸ ಅವರು "ಮುತ್ತಿನ ಹಾರ" ಮಾಲಿಕೆಯಲ್ಲಿ ಈ ಪುಸ್ತಕವನ್ನು ಪ್ರಕಟಿಸಿದ್ದಾರೆ. ಕನ್ನಡ ಸಾಹಿತ್ಯ

ಪರಂಪರೆಯ ಪರಿಚಯವನ್ನು ಮಾಡಿಸುವುದೇ ಈ ಮಾಲಿಕೆಯ ಉದ್ದೇಶವಾಗಿದೆ. ಈ ಆಯ್ಕೆಯು ಪರಿಸರ ಪ್ರೀತಿ, ಮನುಷ್ಯ ಸಂಬಧಗಳ ಉತ್ಕಟ ನೆಲೆಗಳು ಹಾಗೂ ಕನ್ನಡ ಸಂವೇದನೆಯ ಎಲ್ಲ ಜಾಗೃತ, ಜಾತ್ಯಾತೀತ ಧರ್ಮ ನಿರಪೇಕ್ಷ ಮತ್ತು ಸೂಕ್ಷ್ಮಾತೀಸೂಕ್ಷ್ಮ ಅಂಶಗಳನ್ನು ಒಳಗೊಂಡಿದೆ. ಈವರೆಗೆ ಉಪೇಕ್ಷೆಗೆ ಒಳಗಾಗಿದ್ದ ತತ್ವಪದಕಾರರು ದೊಡ್ಡ ಪ್ರಮಾಣದಲ್ಲಿ ಬೆಳಕಿಗೆ ಬಂದುದ್ದು ಈ ಮಾಲಿಕೆಯ ವೈಶಿಷ್ಟವಾಗಿದೆ. "೧೭ ಮತ್ತು ೧೮ನೇ ಶತಮಾನದಲ್ಲಿ ಕನ್ನಡ ಸಾಹಿತ್ಯದ ಸೃಜನಶೀಲತೆ ಭಕ್ತಿ ಮೌನವಾಗಿರದೆ ಶಕ್ತಿಯುತವಾಗಿ ತನ್ನ ಪ್ರತಿಭೆಯನ್ನು ಪ್ರಕಟಿಸಿದೆ ಎನ್ನುವುದು ಈ ತತ್ವಪದಕಾರರು ತೋರಿಸಿಕೊಟ್ಟಿರುವುದನ್ನು ಈ ಮೂಲಕ ದಾಖಲಿಸಿದೆ."[೨೪]

ಈ ಪುಸ್ತಕದಲ್ಲಿ ೩೪ ತತ್ವಪದಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಕೊನೆಯಲ್ಲಿ ಶಬ್ದಕೋಶ ಕೊಡಲಾಗಿದೆ. ಪುಸ್ತಕದ ಪ್ರಾರಂಭದಲ್ಲಿ ಅರ್ಥಪೂರ್ಣ ವಿವರವಾದ ಪ್ರಸ್ತಾವನೆಯನ್ನು ಬರೆಯಲಾಗಿದೆ. ರಜಾಕಾರರ ಚಳುವಳಿ ಮತ್ತು ಪೋಲಿಸ ಕಾರ್ಯಾಚರಣೆಯಲ್ಲಿ ಹುಸನಾಸಾಹೇಬರ ಸ್ಥಿತಿಯನ್ನು ವಿವರಿಸಲಾಗಿದೆ. ಹುಸನಾಸಾಹೇಬರು ಪ್ರಾಸ ಪ್ರಿಯ ಕವಿಗಳಾಗಿದ್ದರು. ಅವರು ತಾವೇ ತಯಾರಿಸಿದ ಕಾಪಿಯಲ್ಲಿ ತಮ್ಮ ಹಾಡುಗಳನ್ನು ಕರಿಷಾಹಿಯಲ್ಲಿ ಎದ್ದಿ ಟಾಕಿನಿಂದ ಮೋಡಿ ಲಿಪಿಯಲ್ಲಿ ಕನ್ನಡ ಭಾಷೆಯಲ್ಲಿ ಬರೆದಿಡುತ್ತಿದ್ದರು. ಅವರು ನೀಳವಾದ ಮೂಗು, ಮಿನುಗುವ ಕಣ್ಣುಗಳು, ಎತ್ತರವು ಅಲ್ಲದೆ ಕುಳ್ಳನು ಅಲ್ಲದ ದೇಹವುಳ್ಳವರು. ತಲೆಯ ಮೇಲೆ ಬಿಳಿವುಂಡಿ ರುಮಾಲು, ಕಾಲಲ್ಲಿ ಚಡಾವು ಮೆಟ್ಟಿಜೋಡು, ಮೈಯಲ್ಲಿ ಸಿಂಗಲ ಕಾಲರ ನೇಕಾರಿಕೆಯ ಬಿಳಿಯ ಬಣ್ಣದ ಅಂಗಿ ತೊಟ್ಟಿಕೊಳ್ಳುತ್ತಿದ್ದರು. ಅವರು ಆಶಾ ಕವಿಗಳಾಗಿದ್ದರು. ಅವರು ಘಟನೆಯನ್ನು ನೋಡಿದ ತಕ್ಷಣ ಆಗಿಂದಾಗಲೆ ಹಾಡುಗಳನ್ನು ರಚಿಸುತ್ತಿದ್ದರು. ಅವರು ಹೈದ್ರಾಬಾದ ಕರ್ನಾಟಕದ ಒಬ್ಬ ಶ್ರೇಷ್ಠ ತತ್ವಪದಕಾರರಾಗಿದ್ದರು. ಅವರಿಗೆ ಗುರುವಿನ ಮೆಲೆ ಅತ್ಯಂತ ಪ್ರೀತಿ ಇತ್ತು.

"ಗುರು ಬೇಕಾದರೆ ತನುಮನ ಧನ
ಈ ಮೂರು ಗುರುವಿನ ಕೊಟಕೂ
ಸಿಗತದ ಅಮೃತದ ಗುಟಕುಂ"[೨೫]

ಇವರು ಅನುಭಾವದ ಪದಗಳನ್ನು ಹಾಡಿದ್ದಾರೆ. ಬೆಡಗಿನ ಹಾಡುಗಳನ್ನು ಹಾಡಿದ್ದಾರೆ. ಇವರು ಹಾರಕೂಡ ಚನ್ನಬಸವ ಶಿವಾಚಾರ್ಯರ ಮೇಲೆ ಅನೇಕ ಪದ್ಯಗಳನ್ನು ರಚಿಸಿದ್ದಾರೆ. ಈಗಲು ಜನ ಅವುಗಳನ್ನು ಭಜನೆಯಲ್ಲಿ ಹಾಡುತ್ತಾರೆ. ಬಸವಕಲ್ಯಾಣ ಕುರಿತು ಅನೇಕ ಕವನಗಳನ್ನು ರಚಿಸಿದ್ದಾರೆ. ಆಗಿನ ಕಲ್ಯಾಣವೇ ಕೈಲಾಸವಾಗಿತ್ತು. ಅಲ್ಲಿ ಶರಣರು ವಾಸವಾಗಿದ್ದರು. ಬಸವೇಶ್ವರರು ಜಗತ್ತನ್ನು ಉದ್ದಾರ ಮಾಡಿದರು.

ಅಲ್ಲಿಯ ತ್ರಿಪುರಾಂತ ಕೆರೆ, ಅಕ್ಕ ನಾಗಮ್ಮ ಗವಿ, ಪ್ರಭುಸ್ವಾಮಿಯ ಗದ್ದುಗೆ, ೯೬ ಸಾವಿರ ಗಣಂಗಳು ಮುಂತಾದವುಗಳನ್ನು ಕುರಿತು ಹಾಡು ಕಟ್ಟಿ ಹಾಡಿದ್ದಾರೆ. ಅವರಿಗೆ ಕೊಳ್ಳೂರು

ಚನ್ನಮಲ್ಲೇಶನ ಬಗ್ಗೆ ಅಪಾರ ಗೌರವ ಚನ್ನಮಲ್ಲೇಶನ ಕುರಿತು ಹಾಡುಗಳನ್ನು ಹಾಡಿದ್ದಾರೆ. ಸೀಗಿ ಹುಣ್ಣಿಮೆಯ ದಿನ ಕೊಳ್ಳೂರಿನಲ್ಲಿ ನಡೆಯುವ ಖಾಂಡನ್ನು ಸುಂದರವಾಗಿ ವರ್ಣಿಸಿದ್ದಾರೆ.

"ಪುರುಷದ ಖಣಿಯ ದರುಶನ ಮಾಡುವುದಕೆ
ಕೊಳ್ಳೂರಕ ಹೋಗಾನು ಬಾ
ಚನ್ನವೀರಗೆ ನೋಡಾನು ಬಾ
ಚಿನ್ಮಯ ರೂಪವ ಕಾಣಾನು ಬಾ

ಆನಂದ ಅನುಭಾವ ಮಂಟಪ
ಶಾಂತವೃತ್ತಿ ಮಹಾಸಾಧುರ ಗುಂಪ
ಒಂಬತ್ತು ದ್ವಾರಕ ಹಚ್ಯಾರ ತಲ್ಪ
ಮಿಂಚ ಹೊಳೆಯತಾವ ಬ್ಯಾಟರಿಗುಲ್ಪ

ಪಂಚತತ್ವದ ಪಂಚವಿಸ ಕಂಬ
ನಾಲ್ಕು ಕಮ್ಮನೂರು ಅಂಗುಲ ಗುಂಪ
ಸದ್ಗುರುನಾತ ಒಳಗ ಹಾನ ಮುಂಬ
ಸೇವೆ ಮಾಡತಾಳ ಸಾಕ್ಷಾತ ಅಂಬಾ

ಸೀಗಿಹುಣ್ಣಿವಿ ದಿನ ಆಗತಾದ ಖಾಂಡ
ಶರಣರು ನೆರಿತಾರ ಜುಂಡಿಗಿ ಜುಂಡ
ಕ್ಷೇತ್ರದೊಳಗೆ ಯಾತ್ರಾ ಪ್ರಚಂಡ
ಹುಸನಾ ಸಾಹೇಬ ಅಲ್ಲಿ ಮೆರಿಸ್ಯಾನ ಝುಂಡ"[31]



"ಕೊಳ್ಳೂರು ಹುಸನಾ" ಎಂಬುದು ಹುಸನಾಸಾಹೇಬರ ಅಂಕಿತನಾಮ ಎಂದಾಗಿದೆ. ಇವರು ಮುಸ್ಲಿಂರಾಗಿದ್ದರು ಭಾರತ ಸ್ವಾಂತಂತ್ರ್ಯಕ್ಕಾಗಿ ಹೋರಾಡಿದ ಗಾಂಧಿ, ಸುಭಾಷ ಚಂದ್ರಬೋಸ ಮುಂತಾದವರ ಬಗ್ಗೆ ಹಾಡುಗಳನ್ನು ಕಟ್ಟಿ ಹಾಡಿದ್ದಾರೆ. ಇದು ಅವರ ದೇಶಭಕ್ತಿಗೆ ಸಾಕ್ಷಿಯಾಗಿದೆ. ಕೋಮು, ಸೌಹಾರ್ದತೆ, ದೇಶಭಕ್ತಿ, ಜಾತ್ಯಾತೀತ ಗುಣ, ಕನ್ನಡ ಪ್ರೇಮ, ಅವರ ಮಹತ್ವದ ಗುಣಗಳಾಗಿವೆ. ಗುಲಬರ್ಗಾ ವಿಭಾಗದಲ್ಲಿಯೇ ಕೊಳ್ಳೂರು ಹುಸನಾಸಾಹೇಬರ ಹೆಸರು ಪ್ರಖ್ಯಾತಿಯನ್ನು ಪಡೆದಿದೆ.

ಅವರು ಹಾರ್ಮೋನಿಯಂ, ತಬಲಾಕೂಡ ಬಾರಿಸುತ್ತಿದ್ದರು. ಅವರ ಮಕ್ಕಳು ಭಜನೆಯ ಹಾಡುಗಳನ್ನು ಕೂಡ ಹಾಡುತ್ತಾರೆ. ಅವರು ಸಂಗೀತ, ಭಜನೆ, ನಾಟಕ, ಕೋಲಾಟ, ಸಭೆ, ಸಮ್ಮೇಳನಗಳು ನಡೆಯುವಲ್ಲಿ ಹಾಜರಿರುತ್ತಿದ್ದರು.

"ಅಲ್ಲಮ ಪ್ರಭು ದೇವರ ವಚನಗಳು" (೧೯೯೮) ಈ ಗ್ರಂಥವನ್ನು ಡಾ. ಜಿ.ಬಿ. ವಿಸಾಜಿ ಅವರು ಸಂಪಾದಿಸಿದ್ದಾರೆ. ಇದನ್ನು ಕಲ್ಯಾಣ ಕರ್ನಾಟಕ ಪ್ರಕಾಶನ ಬಸವ ಮುಕ್ತಿ ಮಂದಿರ ಬೀದರ ಅವರು ಪ್ರಕಟಿಸಿದ್ದಾರೆ. ಭಾತಂಬ್ರಾ, ಭಾಲ್ಕಿ ಮತ್ತು ಬೀದರ ಬಸವ ಮುಕ್ತ ಮಂದಿರದ ಪೀಠಾಧೀಶರಾದ ಪೂಜ್ಯ ಶ್ರೀ ಶಿವಯೋಗಿಶ್ವರ ಮಹಾಸ್ವಾಮಿಗಳವರು ನಿರಂಜನ ಪೀಠಾಧೀಶರಾಗಿ ೨೫ ವರ್ಷಗಳು ತುಂಬುತ್ತಿರುವಾಗ ಈ ಸವಿನೆನಪಿಗಾಗಿ ೨೫ ಶಿವಶರಣರ ವಚನಗಳನ್ನು ಜನಸಾಮಾನ್ಯರಿಗೆ ಪರಿಚಯಿಸುವ ಉದ್ದೇಶದಿಂದ ಅಲ್ಲಮ ಪ್ರಭುದೇವರ ೧೨೫ ವಚನಗಳನ್ನು ಈ ಪುಸ್ತಕದಲ್ಲಿ ಸಂಪಾದಿಸಲಾಗಿದೆ.

ಕನ್ನಡ ನಾಡಿನ ಹಾಗೂ ಭಾರತದ ಧಾರ್ಮಿಕ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಒಂದು ಅಭೂತಪೂರ್ವ ಯುಗವಾಗಿದೆ. ಹಲವಾರು ಶರಣ ಶರಣೆಯರು ಏಕಕಾಲದಲ್ಲಿ ಉದಿಸಿದ ಅನುಪಮ ಕಾಲವದು. ಇಂತಹ ಶರಣ ಸಮುದಾಯದಲ್ಲಿ ವೈರಾಗ್ಯ ಮೂರ್ತಿಯಾಗಿ ಶಿವಯೋಗದ ಶ್ರೀಗಿರಿಶಿಖರವನ್ನೇರಿದವರು ಅಲ್ಲಮ ಪ್ರಭು ದೇವರು.

ಅಲ್ಲಮ ಪ್ರಭುದೇವರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬೆಳಗಾವಿಯಲ್ಲಿ ಹುಟ್ಟಿರುವುದಾಗಿ ಹರಿಹರ ಹೇಳುತ್ತಾನೆ. ಇವರ ತಂದೆ ತಾಯಿ ಹೆಸರುಗಳನ್ನು ನಿರಹಂಕಾರ ಮತ್ತು ಸುಜ್ಞಾನಿ ಎಂಬುದಾಗಿ ಚಾಮರಸ ಕವಿ ಹೇಳುತ್ತಾನೆ.

ಅಲ್ಲಮ ಪ್ರಭುದೇವರ ಗುರು ಅನಿಮಿಷದೇವರು. ಅಲ್ಲಮ ಪ್ರಭುದೇವರ ವಚನಗಳನ್ನು ಸೃಷ್ಟಿಯವಚನ, ಮಂತ್ರಗೋಪ್ಯ ಮತ್ತು ಅನುಭಾವಗೀತೆಗಳನ್ನು ಬರೆದಿರುವರು. ಅವರ ವಚನಗಳ ಅಂಕಿತ "ಗುಹೇಶ್ವರ" ಎಂದಿದೆ. ಈ ಅಂಕಿತವು ಅವರ ಯೋಗಸಾಮರ್ಥ್ಯವನ್ನು ಸೂಚಿಸುತ್ತದೆ. ಅಲ್ಲಮ ಪ್ರಭುದೇವರ ಯೋಗದ ಸಿದ್ಧಿ ಅಪೂರ್ವ ಮತ್ತು ಆಶ್ಚರ್ಯಕರವಾಗಿದೆ. ಹಠಯೋಗ, ರಾಜಯೋಗ, ಮೊದಲಾದ ಎಲ್ಲ ಯೋಗಗಳಲ್ಲಿಯು ಪರಿಣತಿಯನ್ನು ಪಡೆದು ಅವುಗಳ ಆಚೆಗೆ ನಡೆದು ಶಿವಯೋಗದಲ್ಲಿ ನೆಲೆನಿಂತುದನ್ನು ಅವರ ವಚನಗಳಿಂದ ಮನಗಾಣಬಹುದು. ಅಲ್ಲಮ ಪ್ರಭುದೇವರ ಚರಮಸಿದ್ಧಿಯು ವ್ಯೋಮಕಾಯ ಸಂಪಾದನೆಯಲ್ಲಿ ವ್ಯಕ್ತವಾಗುತ್ತದೆ.

ಮಾಯಾಕೋಲಾಹಲನೂ, ವೈರಾಗ್ಯಮೂರ್ತಿಯೂ, ಜ್ಞಾನನಿಧಿಯೂ, ಭಕ್ತವತ್ಸಲನೂ, ಶೂನ್ಯ ಸಿಂಹಾಸನಾಧಿಪತಿಯೂ ಎನಿಸಿಕೊಂಡ ಅಲ್ಲಮ ಪ್ರಭುದೇವರ ವ್ಯಕ್ತಿತ್ವ ಘನವಾದದ್ದು.

ಅಲ್ಲಮ ಪ್ರಭುದೇವರು ಸತ್ಯಪ್ರೇಮಿಯಾಗಿದ್ದರು. ಅವರ ಮಾತು ಜ್ಯೋತಿರ್ಲಿಂಗ, ಭೀತಿ, ಸಂಕೋಚಗಳಿಲ್ಲದೆ ಲೋಕವಿಮರ್ಶೆ ಮಾಡಿದರು. ಅವರ ವಚನಗಳಲ್ಲಿ ಜ್ಞಾನಿಯ

ಅಧಿಕಾರವಾಣಿ ಇದೆ. ಆತ್ಮವಿಶ್ವಾಸವಿದೆ ಮತ್ತು ಉಪಕಾರ ಭಾವ ಕಂಡುಬರುತ್ತದೆ. ಅವರ ವಚನಗಳು ಅಜ್ಞಾನ, ಅಹಂಕಾರಗಳಿಗೆ ಸಿಡಿಲೇಟಿನಂತಿವೆ.

ಅಲ್ಲಮ ಪ್ರಭುದೇವರು ಅಂದಿನ ಶರಣರಲ್ಲಿಯೇ ಶ್ರೇಷ್ಠವ್ಯಕ್ತಿಯಾಗಿದ್ದರು. ಅವರು ಅಂತರ್ಲಕ್ಷಾನುಸಂಧಾನಿಯಾಗಿದ್ದರು. ಒಕ್ಕಲಿಗನಾಗಿದ್ದ ಗೊಗ್ಗಯ್ಯನನ್ನು ಅಂತರ್ಮುಖಿಗೊಳಿಸಿ ಆತ್ಮವೀಕ್ಷಣೆಗೆ ತೊಡಗಿಸಿದ ಕ್ರಮ, ಅಣ್ಣನನ್ನು ಕಳೆದುಕೊಂಡು ಗೋಳಾಡುತ್ತಿರುವ ಮುಕ್ತಾಯಕ್ಕನನ್ನು ಎಚ್ಚರಿಸುವ ರೀತಿ ಯೋಗದ ಕೊನೆಯ ಹಂತದಲ್ಲಿ ನಿಂತು "ಸಾಕಾರನಿಷ್ಠ ಭೂತಂಗಳೊಳಗನುಕಂಪೆ"ಯ ನೋವಿನಲ್ಲಿ ತೊಡಗಿದ್ದ ಸಿದ್ಧರಾಮನನ್ನು ಶಿವಯೋಗಿಯನ್ನಾಗಿಸಿದ ಬಗೆ ಹಠಯೋಗದ ಸಿದ್ಧಿಗಳೇ ಸರ್ವಸ್ವವೆಂಬ ಭ್ರಮೆಗೆ ಒಳಗಾಗಿ ಅಹಂಕಾರದಿಂದ ಮೆರೆಯುತ್ತಿದ್ದ ಗೋರಕ್ಷಕನಿಗೆ ತಿಳಿಯಹೇಳಿದ ರೀತಿ ಅಲ್ಲಮ ಪ್ರಭುದೇವರ ವ್ಯೋಮಕಾಯಸಿದ್ಧಿಗೆ ಉಜ್ವಲಸಾಕ್ಷಿಯಾಗಿದೆ.

ಅವರು ಕಲ್ಯಾಣದಲ್ಲಿ ಶೂನ್ಯ ಸಿಂಹಾಸನದ ಪ್ರಥಮ ಅಧಿಪತಿಯಾಗಿ ಬಸವಣ್ಣ, ಚೆನ್ನಬಸವಣ್ಣ, ಅಕ್ಕಮಹಾದೇವಿ, ಮಡಿವಾಳ ಮಾಚಿದೇವರು, ಮರುಳಿ ಶಂಕರದೇವ, ಆಯ್ದಕ್ಕಿ ಲಕ್ಕಮ್ಮ, ಮುಂತಾದವರೊಡನೆ ನಡೆಯಿಸಿದ ಚರ್ಚೆ ಅಪೂರ್ವವಾಗಿದೆ.

"ಆಸೆಗೆ ಸತ್ತುದು ಕೋಟಿ, ಆಮಿಷಕ್ಕೆ ಸತ್ತುದು ಕೋಟಿ,
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ,
ಗುಹೇಶ್ವರಂ ನಿಮಗಾಗಿ ಸತ್ತವರನಾರನೂ ಕಾಣೆ"[೨೭]

ಅಲ್ಲಮ ಪ್ರಭು ದೇವರು ಶೂನ್ಯ ಸಿಂಹಾಸನದ ಅಧಿಪತಿಗಳಾಗಿದ್ದರು. ಅವರ ವಚನಗಳ ಅಂಕಿತನಾಮ "ಗುಹೇಶ್ವರ" ಎಂದದ್ದು ಅತ್ಯಂತ ಅರ್ಥಪೂರ್ಣವಾಗಿದೆ.

"ಇಷ್ಟಲಿಂಗವ ತೋರಿ ಮೃಷ್ಟಾನ್ನವ ಹೊಡೆವವರಿಗೆ
ಇಷ್ಟಾರ್ಥ ಸಿದ್ಧಿಯದಲ್ಲಿಯದೊ?
ಅದೆಲ್ಲಿಯದೊ ಲಿಂಗ, ಅದೆಲ್ಲೆಯದೊ ಜಂಗಮ?
ಅದೆಲ್ಲಿಯದೊ ಪಾದೋದಕ ಪ್ರಸಾದ?
ಅಲ್ಲದಾಟವನಾಡಿ ಎಲ್ಲರು ಮುಂದುಗೆಟ್ಟರು, ಗುಹೇಶ್ವರಾ ನಿಮ್ಮಾಣೆ"[೨೮]

ಅಲ್ಲಮ ಪ್ರಭುದೇವರು ಇಷ್ಟಾರ್ಥ ಸಿದ್ಧಿಯನ್ನು ಪಡೆಯಲು ಡಾಂಭಿಕತ್ವ ಅಲ್ಲದಾಟಗಳಿಂದ ಸಾಧ್ಯವಿಲ್ಲ ಎಂದು ಈ ವಚನಗಳಲ್ಲಿ ಮಾರ್ಮಿಕವಾಗಿ ತಿಳಿಸಿದ್ದಾರೆ. ಅಲ್ಲಮ ಪ್ರಭುದೇವರು ಜಗತ್ತಿನ ಸರ್ವಶ್ರೇಷ್ಠ ಸಾಹಿತಿಗಳ ಸಾಲಿನಲ್ಲಿ ನಿಲ್ಲಬಲ್ಲವರಲ್ಲಿ ಒಬ್ಬರಾಗಿದ್ದಾರೆ. ಅವರ ಬೆಡಗಿನ

ವಚನಗಳು ಬಹಳ ಪ್ರಸಿದ್ಧವಾಗಿವೆ. ಇವರು ಇಷ್ಟಲಿಂಗ ಸಂಬಂಧಿಸಿದ ಮೇಲೆ ಪ್ರಾಣಲಿಂಗ ಸಂಬಂಧ ಸಾಧ್ಯಾವಾಗುವುದೆಂದು ಹೇಳಿದ್ದಾರೆ. ಕಲ್ಯಾಣವೆಂಬುದು ಭಕ್ತಿರಸದಿಂದ ಕೂಡಿದ ಪಣತೆಯಾಗಿದ್ದು ಆಚಾರವೇ ಪ್ರಧಾನವಾಗಿದ್ದು ಬಸವಣ್ಣನವರು ತಮ್ಮ ಜ್ಞಾನದ ಜ್ಯೋತಿಯನ್ನು ಮುಟ್ಟಿಸಲು ಅಲ್ಲಿ ಶಿವನ ಪ್ರಕಾಶ ಬೆಳಗುತ್ತಿದ್ದರು. ಅಲ್ಲಿ ಅಸಂಖ್ಯಾತ ಭಕ್ತಗಣಗಳು ಶಿವಭಕ್ತರು ಕೂಡಿದ್ದರು. ಇಡೀ ಕಲ್ಯಾಣ ಎಂಬುದು ಪಾವನ ದೇಶವಾಗಿತ್ತು.

ಒಟ್ಟಿನಲ್ಲಿ ಅಲ್ಲಮ ಪ್ರಭುದೇವರ ವ್ಯಕ್ತಿತ್ವ ಮತ್ತು ವಚನದ ರಚನೆ ಕನ್ನಡ ಭಾರತೀಯ ಹಾಗೂ ಜಾಗತಿಕ ಸಾಹಿತ್ಯಕ್ಕೆ ಅಸಾಧಾರಣವಾದ ತೇಜಸ್ಸುಗಳ ಕಾಣಿಕೆಯಾಗಿತ್ತದೆ.

**೬) ಸಂಶೋಧನಾ ಸಾಹಿತ್ಯ :**

ಡಾ.ಜಿ.ಬಿ.ವಿಸಾಜಿ ಅವರು ಅವರು "ಶೂನ್ಯ ಸಂಪಾದನೆಗಳು ಒಂದು ತೌಲನಿಕ ಅಧ್ಯಯನ" ವಿಷಯ ಕುರಿತು ಡಾ. ಬಸವರಾಜ ಮಲಶೆಟ್ಟಿ ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ೧೯೯೨ರಲ್ಲಿ ಸಾದರ ಪಡಿಸಿದ ಸಂಶೋಧನ ಪ್ರಬಂಧವಾಗಿದೆ. ಡಾ. ಆರ್.ಸಿ. ಹಿರೇಮಠ ಮತ್ತು ಡಾ. ಘಪ್ಪೇರುದ್ರ ಸ್ವಾಮಿ ಅವರು ಬಾಹ್ಯ ಪರೀಕ್ಷಕರಾಗಿದ್ದರು. ೧೯೯೩ರಲ್ಲಿ ಡಾ. ಜಿ.ಬಿ.ವಿಸಾಜಿ ಅವರಿಗೆ ಪಿಎಚ್.ಡಿ ಪದವಿ ಪ್ರಧಾನ ಮಾಡಲಾಯಿತು.

ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನಗಳಿಸಿರುವ ಶೂನ್ಯ ಸಂಪಾದನೆಗಳ ಮಹತ್ವ ಅದ್ವೀತಿಯವಾದುದ್ದಾಗಿದೆ. ಡಾ. ಫ.ಗು. ಹಳಕಟ್ಟಿ ಅವರು ೧೯೩೦ರಲ್ಲಿ ಪ್ರಥಮ ಸಲ ಗೋಳೂರು ಸಿದ್ಧವೀರಣ್ಣೊಡೆಯನ ಶೂನ್ಯ ಸಂಪಾದನೆ ಪ್ರಕಟಿಸಿದರು. ಅಂದಿನಿಂದ ವಿದ್ವಾಂಸರ ದೃಷ್ಟಿ ಶೂನ್ಯ ಸಂಪಾದನೆಗಳತ್ತ ಹರಿಯಿತು. ಶೂನ್ಯ ಸಂಪಾದನೆಯ ಅಧ್ಯಾಯನವೆಂದರೆ ವೀರಶೈವ ಧರ್ಮ ಮತ್ತು ತತ್ವಗಳ ಅಧ್ಯಯನ ಎಂಬ ಅಭಿಪ್ರಾಯ ಸಾಮಾನ್ಯವಾಗಿ ರೂಢಿಗೊಂಡಿತ್ತು.

ಶೂನ್ಯ ಸಂಪಾದನೆಯ ಸಂಖ್ಯೆಯ ಬಗ್ಗೆ ಮೊದಲು ಎಂ.ಆರ್. ಶ್ರೀನಿವಾಸ ಮೂರ್ತಿ ಅವರು ಚರ್ಚೆ ಪ್ರಾರಂಭಿಸಿದರು. ಹಲವು ತೊಡಕುಗಳನ್ನು ನಿವಾರಿಸುತ್ತಾ ಹೊಸ ಸಮಸ್ಯೆಗಳನ್ನು ಆಹ್ವಾನಿಸುತ್ತಾ ಈ ಚರ್ಚೆ ಸಾಗಿಬಂದಿತ್ತು. ವಾಸ್ತವವಾಗಿ ಶೂನ್ಯ ಸಂಪಾದನೆಗಳು ನಾಲ್ಕು. ಕೆಂಚವೀರಣ್ಣೊಡೆಯನ ಹಲಗೆದೇವನ ಶಿಷ್ಯನಾಗಿದ್ದು ಹಲಗೆದೇವನ ಸಂಪಾದನೆಯನ್ನು ಕೆಂಚವಿರಣ್ಣೊಡೆಯನ ಇನ್ನೊಂದು ಶೂನ್ಯ ಸಂಪಾದನೆ ಎಂದು ತಪ್ಪಾಗಿ ಭಾವಿಸಲಾಗಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಶೂನ್ಯ ಸಂಪಾದನೆ ವೃದ್ಧಿಸಲು ಕಾರಣಗಳೇನು? ಹಲಗೆದೇವನ ಶಿಷ್ಯನಾಗಿದ್ದು ಹಲಗೆದೇವನ ಸಂಪಾದನೆಯನ್ನು ಕೆಂಚವೀರಣ್ಣೊಡೆಯನ ಎಂಬುದು ಕುತೂಹಲ ಪೂರ್ಣವಾಗಿದೆ.

ಸುಮಾರು ೨೦೦ ವರ್ಷಗಳಷ್ಟು ವ್ಯಾಪ್ತಿಯಲ್ಲಿ ರಚನೆಗೊಂಡಿರುವ ಶೂನ್ಯ ಸಂಪಾದನೆ ವಿವಿಧ ಧಾರ್ಮಿಕ ಮನೋಭಾವನೆಗಳ ಪ್ರತಿನಿದಿಗಳಾಗಿವೆ. ಶರಣರ ಚರಿತ್ರೆಗಳಿಗೆ ಸಂಬಂಧಪಟ್ಟ ಕೆಲವು ಅಂಶಗಳು ಶೂನ್ಯ ಸಂಪಾದನೆಗಳ ಪ್ರತ್ಯಕ್ಷ ಅಪ್ರತ್ಯಕ್ಷ ಪರಿಷ್ಕರಣಗಳಿಗೆ ಕಾರಣಗಳಾಗಿವೆ.

ವೀರಶೈವ ಧರ್ಮ ತತ್ವಗಳ ಜಿಜ್ಞಾಸೆಯಲ್ಲಿ ವ್ಯಕ್ತವಾಗಿರುವ ವಿಭಿನ್ನ ದೃಷ್ಟಿಕೋನಗಳನ್ನು ಅರ್ಥೈಸಿಕೊಳ್ಳಲು ಶೂನ್ಯ ಸಂಪಾದನೆಗಳ ಮೋರೆ ಹೋಗುವುದು ಅನಿವಾರ್ಯವಾಗಿದೆ. ಈ ಕಾರಣಕ್ಕಾಗಿ ಇವುಗಳ ತೌಲನಿಕ ಅಧ್ಯಯನದ ಅವಶ್ಯಕತೆ ಇದೆ. ನಾಲ್ಕು ಶೂನ್ಯ ಸಂಪಾದನೆಗಳ ತೌಲನಿಕ ಅಧ್ಯಯನ ಇಲ್ಲಿವರೆಗೆ ನಡೆದಿಲ್ಲ ಆದ್ದರಿಂದ ಪ್ರಸ್ತುತ "ಶೂನ್ಯ ಸಂಪಾದನೆಗಳು ಒಂದು ತೌಲನಿಕ ಅಧ್ಯಯನ" ಎಂಬ ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಶೂನ್ಯ ಸಂಪಾದನೆಗಳ ತೌಲನಿಕ ಅಧ್ಯಯನ ಪ್ರತಿಯೊಂದು ಬಿಡಿ ಸಂಪಾದನೆಗಳ (ಅಧ್ಯಾಯಗಳ) ಆಧಾರದ ಮೇಲೆ ಕೈಗೊಳ್ಳಲಾಗಿದೆ. ಇಂತಹ ಬಿಡಿ ಸಂಪಾದನೆಗಳು ಒಂದು ಶೂನ್ಯ ಸಂಪಾದನೆಯಿಂದ ಇನ್ನೊಂದು ಶೂನ್ಯ ಸಂಪಾದನೆ ಬೆಳೆಯುತ್ತಾ ಕರಗುತ್ತಾ ಬಂದುದ್ದನ್ನು ಏರಿಳಿತವನ್ನು ಸಾಧ್ಯವಾದಷ್ಟು ಸೂಕ್ಷ್ಮವಾಗಿ ಗುರುತಿಸಲಾಗಿದೆ. ಪೂರ್ವ ರಚಿತ ವಚನಗಳನ್ನು ಸಂಭಾಷಣೆಯ ರೂಪದಲ್ಲಿ ಸಂಯೋಜಿಸಿ ಸ್ವಂತದ ಗದ್ಯದ ತುಂಡುಗಳಿಂದ ಏಕಸೂತ್ರತೆಯನ್ನು ಕಲ್ಪಿಸಿರುವ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿದೆ. ವೀರಶೈವ ಧರ್ಮ ತತ್ವಗಳ ಪಠ್ಯಗಳ ಗ್ರಂಥವಾಗಿ ಸಾರ್ವಕಾಲಿಕ ಮಾನವೀಯ ಸಿದ್ಧಿ ಸಾಧನೆಗಳ ಅನ್ವೇಷಣೆಗೆ ವೇದಿಕೆಯಾಗಿ ಶೂನ್ಯ ಸಂಪಾದನೆಗಳು ತಮ್ಮ ವಿಶಿಷ್ಟ ಸ್ಥಾನವನ್ನು ಉಳಿಸಿಕೊಂಡಿವೆ. ಈ ಮಾದರಿಯ ಕೃತಿಗಳ ಮುಂದೆ ಹುಟ್ಟಲಿಲ್ಲ ಎಂಬುದು ಗಮನಾರ್ಹ ಸಂಗತಿಯಾಗಿದೆ.

**೧) ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :**

ಇಲ್ಲಿಯವರೆಗೆ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯ ಸಂಪಾದನೆ, ಹಲಗೆದೇವರ ಶೂನ್ಯ ಸಂಪಾದನೆ, ಗುಮ್ಮಳಾಪುರದ ಸಿದ್ದಲಿಂಗದೇವರ ಶೂನ್ಯ ಸಂಪಾದನೆ ಮತ್ತು ಹೊಸದಾಗಿ ರೂಪಿಸಿದ ಗೊಳೂರ ಸಿದ್ದವೀರಣ್ಣೊಡೆಯರ ಶೂನ್ಯ ಸಂಪಾದನೆ ಈ ನಾಲ್ಕು ಶೂನ್ಯ ಸಂಪಾದನೆಗಳ ತೌಲನಿಕ ಅಧ್ಯಯನ ನಡೆದಿರಲಿಲ್ಲಿ ಈ ತೌಲನಿಕ ಅಧ್ಯಯನ ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ. ಅದಕ್ಕೆ ಪೂರಕವಾಗಿ ವಚನ ಸಾಹಿತ್ಯದ ಉಗಮ, ವಿಕಾಸಗಳನ್ನು ಶೂನ್ಯ ಸಂಪಾದನೆಗಳ ಸೃಷ್ಟಿಗೆ ಕಾರಣವಾದ ಪ್ರೇರಣೆ ಮತ್ತು ಒತ್ತಡಗಳನ್ನು ಕುರಿತು ಸಾಧ್ಯವಾದಷ್ಟು ವಿವರಗಳನ್ನು ಒದಗಿಸಲಾಗಿದೆ.

**೨) ಶೂನ್ಯ ಸಂಪಾದನೆಯ ಹಿನ್ನೆಲೆ :**

ವಚನ ಸಾಹಿತ್ಯದ ಉಗಮ : ಕನ್ನಡದ ಅತ್ಯಂತ ಮಹತ್ವದ ಸಾಹಿತ್ಯ ಪ್ರಕಾರವಾಗಿ ಗದ್ಯದ ಸಮೀಪದ ಪದ್ಯ ರೂಪದಲ್ಲಿಯು ಪದ್ಯರೂಪಿ ಯಾದ ಗದ್ಯದಲ್ಲಿಯು ಒಡಮೂಡಿದೆ.

ವಿಶ್ವಸಾಹಿತ್ಯದಲ್ಲಿ ಇಂತಹ ಸಾಹಿತ್ಯ ಪ್ರಕಾರ ತೀರ ವಿರಳವಾದುದ್ದು. ಕನ್ನಡ ತನದ ಕಂಪುಸೂಸುವ ವಚನಗಳು ಸ್ವಂತಿಕೆಯನ್ನು ಪಡೆದುಕೊಂಡಿವೆ.

ವಚನಗಳ ರಚನಾ ಸಂದರ್ಭ ಮತ್ತು ಸಂಗ್ರಹ ಸಾಧಕನ ಅಂತರಂಗದ ಅಭಿಪ್ಸೆ, ಸಂಘರ್ಷ ತಳಮಳಗಳನ್ನು ಅಭಿವ್ಯಕ್ತಗೊಳಿಸುವುದು ವಚನಗಳ ಮುಖ್ಯ ಉದ್ದೇಶವಾಗಿದೆ. ಅನುಭಾವದ ಪ್ರಸಂಗ, ಸದ್ಗೋಷ್ಟಿ ಮತ್ತು ವಚನ ರಚನೆ ಒಂದಕ್ಕೊಂದು ಪೂರಕವಾಗಿದೆ. ಪ್ರತಿಭಾವಂತರ ನಿರಂತರ ಒಡನಾಟದಲ್ಲಿದ್ದ ಹಾಗು ಅನುಭಾವ ಗೋಷ್ಠಿಗಳ ಸಕ್ರಿಯ ಸದಸ್ಯರಾಗಿದ್ದ ಸಾಮಾನ್ಯ ಜನರು ಅದ್ಭುತವೆನಿಸುವ ಗುಣ ಮತ್ತು ಪ್ರಮಾಣಗಳಲ್ಲಿ ವಚನಗಳನ್ನು ರಚಿಸಿದ್ದಾರೆ.

ಶಿವಶರಣರು ತಮ್ಮ ವಚನಗಳ ರಚನೆಯನ್ನು ಸ್ವತಃ ಬರೆದಿಡುತ್ತಿದ್ದರು. ಅನುಭಾವ ಗೋಷ್ಠಿಯ ಚರ್ಚೆಗಳಲ್ಲಿ ಮೂಡಿಬಂದ ವಚನಗಳನ್ನು ಅಲ್ಲಿಯೇ ಲಿಪಿಕಾರನೊಬ್ಬನು ಬರೆದುಕೊಳ್ಳತಿರಬಹುದು. ಇತರ ಭಂಡಾರಗಳಂತೆ ವಚನಗಳ ಒಂದು ಭಂಡಾರವಿದ್ದು ಅದರ ನಿರ್ವಹಣೆಗೆ ಶಾಂತರಸನೆಂಬ ಅಧಿಕಾರಿಯಿದ್ದ ಎಂಬ ಸಂಗತಿ ಅತ್ಯಂತ ಮಹತ್ವದ್ದಾಗಿದೆ.

ಕಲ್ಯಾಣದ ವಿಪ್ಲವ ಮತ್ತು ವಚನ ಸಂಗ್ರಹದ ಮೇಲೆ ಅದರ ಪರಿಣಾಮ : ಕ್ರಿ.ಶ. ೧೧೬೭ರಲ್ಲಿ ನಡೆದ ಕಲ್ಯಾಣದ ವಿಪ್ಲವ ನಮ್ಮ ನಾಡಿನ ಇತಿಹಾಸದಲ್ಲಿ ದಾಖಲೆ ಗೊಂಡಿರುವ ಒಂದು ದುರಂತ ಅಧ್ಯಾಯವಾಗಿದೆ. ಈ ಸಂದರ್ಭದಲ್ಲಿ ವಚನ ಭಂಡಾರಕ್ಕೆ ದುಸ್ಥಿತಿ ಒದಗಿತ್ತು. ವಚನ ಭಂಡಾರದ ಬಹಳಷ್ಟು ಕಟ್ಟುಗಳು ವಿರೋಧಿಗಳ ಕೋಪಾಗ್ನಿಗೆ ಗುರಿಯಾದವು. ಶಿವಶರಣರೆಲ್ಲ ದಿಕ್ಕು ಪಾಲಾಗಿ ಚದುರಿಹೋದರು. ಈ ಚದುರುವಿಕೆ ವೀರಶೈವ ವಚನಗಳ ಪ್ರಸಾರ ದೃಷ್ಟಿಯಿಂದ ಬಹುಮುಖ್ಯ ಕಾರ್ಯಸಾಧಿಸಿತು.

೧೫ನೇ ಶತಮಾನದವರೆಗೆ ಗುಪ್ತನಿಧಿಯಂತೆ ಮರೆಯಲ್ಲಿದ್ದ ವಚನ ಸಾಹಿತ್ಯವು ವಿಜಯನಗರದ ಕಾಲಕ್ಕೆ ಪುನಹ ಬೆಳಕಿಗೆ ಬಂದಿತ್ತು. ವಚನ ಸಾಹಿತ್ಯದಲ್ಲಿ ಸಕಲ ಪುರಾತನ ವಚನಗಳ ಸ್ಥಾನ ಗುರುತರವಾದುದ್ದಾಗಿದೆ. ಪುರಾತನ ವಚನಗಳ ಕಟ್ಟುಗಳನ್ನು ಆಧರಿಸಿ ಅನೇಕ ತಾತ್ವಿಕ ಸಂಕಲನಗಳು ರೂಪುಗೊಂಡವು. ಮುಂದೇ ವಚನಗಳ ವ್ಯಾಖ್ಯಾನ ಪರಂಪರೆ ಸಮೃದ್ಧವಾಗಿ ಬೆಳೆಯಿತು. ಇವೆಲ್ಲವುಗಳಿಗಿಂತ ಮಿಗಿಲಾಗಿ ವಚನಗಳ ಸಂಪಾದನೆ ಸಾಹಿತ್ಯ ಪರಂಪರೆ ಬೆಳೆದು ಬಂದದ್ದು ತುಂಬ ಮಹತ್ವದ ಸಂಗತಿಯಾಗಿದೆ.

**೩) ಶೂನ್ಯ ಸಂಪಾದನೆಗಳು :**

- ಶೂನ್ಯ ವಿವೇಚನೆ : "ಶೂನ್ಯ" ಎಂಬ ಪದವು ಭಾರತೀಯ ತತ್ವ ಶಾಸ್ತ್ರದಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಬಳಸಲ್ಪಟ್ಟಿದೆ. ಇದೊಂದು ಮಹತ್ವದ ಪಾರಿಭಾಷಿಕ ಪದವಾಗಿದೆ. ಶರಣರ ಪ್ರಕಾರ ಶೂನ್ಯ ಎಂದರೆ ಪೂರ್ಣವಾದದ್ದು ಎಂದು ಅರ್ಥ.

❖ ಪ್ರೇರಣೆ ಮತ್ತು ಉದ್ದೇಶ : ಸಕಲ ಪುರಾತನರ ವಚನಗಳ ಕಟ್ಟುಗಳಲ್ಲಿ "ಸಂಪಾದನೆಯ ವಚನಗಳು" ಎಂಬ ಒಂದು ಭಾಗವಿದೆ. ಈ ಭಾಗವು ಶೂನ್ಯ ಸಂಪಾದನೆ ರಚನೆಯ ಕಲ್ಪನೆ ನೀಡಿರಬಹುದು. ವಚನಗಳ ಮೂಲಕ ವೀರಶೈವ ತತ್ವ ಜ್ಞಾನವನ್ನು ಪರಿಣಾಮಕಾರಿಯಾಗಿ ಪ್ರತಿಪಾದಿಸುವುದು ಶೂನ್ಯ ಸಂಪಾದನಕಾರನ ಮುಖ್ಯ ಉದ್ದೇಶವಾಗಿದೆ.

❖ ಶೂನ್ಯ ಸಂಪಾದನೆಯ ಸ್ವರೂಪ : ಪ್ರಥಮ ಶೂನ್ಯ ಸಂಪಾದಕನಾದ ಶಿವಗಣ ಪ್ರಸಾದಿ ಮಹಾದೇವಯ್ಯನು ತನ್ನ ಸಂಪಾದನೆಯನ್ನು "ಕಥಾ ಪ್ರಸಂಗ" ಎಂದು ಕರೆದಿರುವನು. ಇದು ಶೂನ್ಯ ಸಂಪಾದನೆಯ ಕಥಾ ತಂತ್ರವನ್ನು ಆಧರಿಸಿದೆ. ಪ್ರಸಂಗ ಎಂದರೆ ಹಲವರು ಸೇರಿ ನಡೆಸುವ ಚರ್ಚೆ ಇಲ್ಲಿ ಕಥೆಯ ಗುರಿ ಜ್ಞಾನ ಪ್ರತಿಪಾದನೇಯಾಗಿದೆ.

❖ ಶೂನ್ಯ ಸಂಪಾದನೆಯ ಸಂಖ್ಯೆ : ಶೂನ್ಯ ಸಂಪಾದನೆ ಹಲವು ಬಾರಿ ಪರಿಷ್ಕ್ರಣಕ್ಕೆ ಒಳಗಾಗಿದೆ. ಹೀಗೆ ಪರಿಷ್ಕೃತಗೊಂಡ ಶೂನ್ಯ ಸಂಪಾದನೆಗಳು ಸ್ವತಂತ್ರ ಕೃತಿಗಳೆನಿಸಿದವು. ಇವುಗಳ ಸಂಖ್ಯೆಯ ಬಗ್ಗೆ ಒಮ್ಮತ ಅಭಿಪ್ರಾಯವಿರಲಿಲ್ಲ. ಈಗ ನಾಲ್ಕು ಶೂನ್ಯ ಸಂಪಾದನೆಗಳು ರಚನೆಗೊಂಡಿರುವುದು ಸ್ಪಷ್ಟವಾಗುತ್ತದೆ. ಶಿವಗಣ ಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆ, ಹಲಗೆದೇವರ ಶೂನ್ಯ ಸಂಪಾದನೆ, ಗುಮ್ಮಳಪುರದ ಸಿದ್ದಲಿಂಗದೇವನ ಶೂನ್ಯ ಸಂಪಾದನೆ, ಗೊಳೂರು ಸಿದ್ದವೀರಣ್ಣೊಡೆಯನ ಶೂನ್ಯ ಸಂಪಾದನೆ ಇವೇ ಆ ನಾಲ್ಕು ಶೂನ್ಯ ಸಂಪಾದನೆಗಳು.

❖ ಪರಿಷ್ಕರಣೆ : ಮೂಲ ಶೂನ್ಯ ಸಂಪಾದನೆಯಿಂದ ಪರಿಷ್ಕರಣ ಕ್ರಿಯೆ ಪ್ರಾರಂಭವಾಗಲು ಅತ್ಯಂತ ಮುಖ್ಯವಾದ ಎರಡು ಕಾರಣಗಳಿವೆ. ಒಂದು ಸಿದ್ಧರಾಮನ ದೀಕ್ಷೆ ಇನ್ನೊಂದು ಅಲ್ಲಮನ ಜೀವನ ವೃತ್ತಾಂತದ ಪೂರ್ವ ಭಾಗ. ವಿಭಿನ್ನ ದೃಷ್ಟಿಕೋನಗಳಲ್ಲಿರುವ ಆಂತರಿಕ ಏಕ ಸೂತ್ರತೆಯನ್ನು ಮೂಲತಃ ಒಂದೇ ಉದ್ದೇಶ ಧೋರಣೆಯನ್ನು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಾಣುತ್ತೇವೆ. ಆದ್ದರಿಂದ ಶೂನ್ಯ ಸಂಪಾದನೆ ಜನಮನಕ್ಕೆ ಸ್ಪಂದಿಸಿದ ಒಂದು ಅಪೂರ್ವ ಕೃತಿಯಾಗಿದೆ.

❖ ಶೂನ್ಯ ಸಂಪಾದನಕಾರರು : ಪ್ರಥಮ ಶೂನ್ಯ ಸಂಪಾದನಕಾರರು ಶಿವಗಣ ಪ್ರಸಾದಿ ಮಹಾದೇವಯ್ಯ. ಎರಡನೇ ಶೂನ್ಯ ಸಂಪಾದನೆಯ ಕರ್ತೃ ಹಲಗೆದೇವನು ಎಂಬುದು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಮೂರನೇ ಶೂನ್ಯ ಸಂಪಾದನೆಯ ಕರ್ತೃ ಗುಮ್ಮಳಪುರದ ಸಿದ್ಧಲಿಂಗದೇವರು ಈತನು ತೋಂಟದ ಸಿದ್ಧಲಿಂಗದೇವರ ಶಿಷ್ಯ ಎಂಬುದು ಸ್ಪಷ್ಟವಾಗುತ್ತದೆ. ನಾಲ್ಕನೇ ಶೂನ್ಯ ಸಂಪಾದನೆಯ ಕರ್ತೃ ಗೋಳೂರು ಸಿದ್ಧವೀರಣ್ಣೊಡೆಯರ ಇವರು ಸಿದ್ಧಲಿಂಗನ ನಂತರ ಶೂನ್ಯ ಪೀಠವನ್ನು ಏರಿದರು.

## ೪) ಶೂನ್ಯ ಸಂಪಾದನೆಗಳ ತೌಲನಿಕ ಸಮೀಕ್ಷೆ :

ಶೂನ್ಯ ಸಂಪಾದನೆ ತೌಲನಿಕ ಅಧ್ಯಯನವನ್ನು ಪ್ರತಿಯೊಂದು ಬಿಡಿ ಸಂಪಾದನೆಗಳ (ಅಧ್ಯಾಯಗಳು) ಆಧಾರದ ಮೇಲೆ ಕೈಗೊಳ್ಳಲಾಗಿದೆ. ಇಂತಹ ಬಿಡಿ ಸಂಪಾದನೆಗಳು ಒಂದು ಶೂನ್ಯ ಸಂಪಾದನೆಯಿಂದ, ಇನ್ನೊಂದು ಶೂನ್ಯ ಸಂಪಾದನೆಗೆ ಬೆಳೆಯುತ್ತಾ, ಕರಗುತ್ತಾ ಬಂದದ್ದನ್ನು ಹೊಸ ಸಂಪಾದನೆ ಸೇರಿಕೊಂಡದ್ದನ್ನು, ವಚನಗಳ ಸಂಖ್ಯೆಗಳ ಪ್ರಮಾಣದ ಏರಿಳಿತವನ್ನು ಸಾಧ್ಯವಾದಷ್ಟು ಸೂಕ್ಷ್ಮವಾಗಿ ಗುರುತಿಸಲಾಗಿದೆ.

- ಪ್ರಥಮೋಪದೇಶ
- ಮುಕ್ತಾಯಕ್ಕನ ಸಂಪಾದನೆ
- ಸಿದ್ಧರಾಮಯ್ಯನ ಸಂಪಾದನೆ
- ಬಸವಣ್ಣನು ಚೆನ್ನಬಸವಣ್ಣನಿಗೆ ಅನುಗ್ರಹ ಮಾಡಿದ ಸಂಪಾದನೆ
- ಪ್ರಭು ಕಲ್ಯಾಣಕ್ಕೆ ಬಂದ ಸಂಪಾದನೆ
- ಮರುಳುಶಂಕರ ದೇವರ ಸಂಪಾದನೆ
- ಬಸವಣ್ಣನ ಸಂಪಾದನೆ
- ಚೆನ್ನಬಸವಣ್ಣನ ಸಂಪಾದನೆ
- ಪ್ರಭುದೇವರ ಪೂಜಸ್ತುತಿ ಸಂಪಾದನೆ
- ಮಡಿವಾಳಯ್ಯಗಳ ಸಂಪಾದನೆ
- ಸಿದ್ಧರಾಮೇಶ್ವರ ದೇವರ ಗುರುಕರಣ ಸಂಪಾದನೆ
- ಉಡುತಡಿಯ ಮಹಾದೇವಿಯಕ್ಕನ ಸಂಪಾದನೆ
- ಪ್ರಭು ದೇಶಾಂತರ ಹೋಗಿ ಬಂದ ಸಂಪಾದನೆ
- ಪ್ರಭುದೇವರು ಶೂನ್ಯ ಸಿಂಹಾಸನ ಏರಿದ ಸಂಪಾದನೆ
- ಪ್ರಭುದೇವರ ಆರೋಗಣೆ
- ಶರಣರ ಅವಸಾನ ಪರಮರಿಕೆ
- ಗೋರಕ್ಷಕನ ಸಂಪಾದನೆ ಮತ್ತು ಎಲ್ಲಾ ಗಣಂಗಳ ಐಕ್ಯ

ಈ ಹದಿನೇಳು ಸಂಪಾದನೆಗಳಲ್ಲದೆ

೧) ನುಲಿಯ ಚಂದಯ್ಯಗಳ ಸಂಪಾದನೆ (ಶೂ.ಸಂ. II. III IV ರಲ್ಲಿ)

೨) ಆಯ್ದಕ್ಕಿ ಮಾರಯ್ಯಗಳ ಸಂಪಾದನೆ (ಶೂ. ಸಂ. III IV ರಲ್ಲಿ)

೩) ಮೋಳಿಗೆ ಮಾರಯ್ಯಗಳ ಸಂಪಾದನೆ (ಶೂ. ಸಂ. IV ರಲ್ಲಿ)

೪) ಗಟ್ಟಿವಾಳಯ್ಯಗಳ ಸಂಪಾದನೆ (ಶೂ. ಸಂ. IV ರಲ್ಲಿ)
ಹೊಸದಾಗಿ ಸೇರ್ಪಡೆಯಾಗಿವೆ. ವೀರಶೈವ ಧರ್ಮದ ವಿವಿಧ ತತ್ವ ಸಿದ್ಧಾಂತಗಳನ್ನು ಚರ್ಚೆಯ ಮೂಲಕ ಪ್ರತಿಪಾದಿಸಬೇಕೆಂಬ ಉದ್ದೇಶವೇ ಈ ಹೊಸ ಸೇರ್ಪಡೆಗೆ ಕಾರಣವಾಗಿದೆ.

**೫) ಸಮಾರೋಪ :**

**ಶೂನ್ಯ ಸಂಪಾದನೆಗಳು ಮತ್ತು ಇತರ ಕೃತಿಗಳು** : ವೀರಶೈವ ಧರ್ಮದ ತಿರುಳನ್ನು ವಿವರಿಸುವ ಉದ್ದೇಶಕ್ಕಾಗಿ ಶೂನ್ಯ ಸಂಪಾದನೆ ಜನ್ಮ ತಾಳಿದ್ದು ನಿಜ. ಕಾಲಕಾಲಕ್ಕೆ ತಮ್ಮ ತಮ್ಮ ದೃಷ್ಟಿಕೋನಕ್ಕೆ ತಕ್ಕಂತೆ ತತ್ವ ಮತ್ತು ಸಿದ್ಧಾಂತಗಳನ್ನು ಶೂನ್ಯ ಸಂಪಾದನೆ ಪ್ರತಿಪಾದಿಸಿದೆ.

ಹರಿಹರ ಪ್ರಭುದೇವರ ರಗಳೆ, ಬಸವರಾಜ ದೇವರ ರಗಳೆ, ಮಹಾದೇವಿ ಅಕ್ಕನ ರಗಳೆ, ರಾಘವಾಂಕನ ಸಿದ್ಧರಾಮನ ಚರಿತ್ರೆ, ಭೀಮಕವಿಯ ಬಸವಪುರಾಣ, ಚಾಮರಸನ ಪ್ರಭುಲಿಂಗ ಲೀಲೆ, ಲಕ್ಕಣ ದಂಡೇಶನ ಶಿವತತ್ವ ಚಿಂತಾಮಣಿ, ಕಲ್ಲು ಮಠದ ಪ್ರಭುದೇವನ ಲಿಂಗಲೀಲಾ ಚರಿತ್ರೆ ಮುಂತಾದ ಕೃತಿಗಳು ಶೂನ್ಯ ಸಂಪದನೆಗಳ ನಿರ್ಮಾಣ ಮತ್ತು ಪರಿಷ್ಕರಣಗಳಿಗೆ ಪೋಷಕವಾಗಿವೆ.

**ಶೂನ್ಯ ಸಂಪಾದನೆ ಸ್ಥಾನ** : ಕನ್ನಡ ಸಾಹಿತ್ಯದಲ್ಲಿ ಶೂನ್ಯ ಸಂಪಾದನೆಗಳಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಇವು ವೀರಶೈವ ಸಮಾಜಕ್ಕೆ ಪರಂಪರೆ ನೀಡಿರುವ ಅಪೂರ್ವ ಕೊಡುಗೆಯಾಗಿದೆ.

ಈ ಪಿಎಚ್.ಡಿ. ಪ್ರಬಂಧದ ಕೊನೆಯಲ್ಲಿ ಅನುಬಂಧ ೧ ರಲ್ಲಿ ಸಂಪಾದನೆಗಳ ವಚನ ಸಂಖ್ಯೆ ಕೊಡಲಾಗಿದೆ. ಅನುಬಂಧ – ೨ರಲ್ಲಿ ಗ್ರಂಥಋಣ ಸೂಚಿಸಲಾಗಿದೆ ಅನುಬಂಧ – ೩ರಲ್ಲಿ ಹಲಗೆ ದೇವರ ಶೂನ್ಯ ಸಂಪಾದನೆ ಕಾಗದ ಪ್ರತಿಯ ಒಂದು ಪುಟದ ಚಿತ್ರ ಕೊಡಲಾಗಿದೆ. ಅನುಬಂಧ–೪ರಲ್ಲಿ ೧೯೩೦ರಲ್ಲಿ ಫ.ಗು. ಹಳಕಟ್ಟಿ ಅವರು ಸಂಪಾದಿಸಿ ಪ್ರಕಟಿಸಿದ "ಶೂನ್ಯ ಸಂಪಾದನೆ" ಮುಖ ಪುಟದ ಚಿತ್ರ ಕೊಡಲಾಗಿದೆ.

ಇದು ಡಾ. ಜಿ.ಬಿ. ವಿಸಾಜಿ ಅವರು ಸಂಶೋಧನ ಕೈಗೊಂಡ ಮಹತ್ವದ ಪ್ರಬಂಧವಾಗಿದೆ.

## ೭) ಪತ್ರಿಕೋದ್ಯಮ ಸಾಹಿತ್ಯ :

ಪತ್ರಿಕೋದ್ಯಮವೆಂದರೆ ವರದಿಕೊಡುವುದು. ಸುದ್ದಿಯನ್ನು ಆಧರಿಸಿ ವ್ಯಾಖ್ಯಾನ ಮಾಡುವುದು ಮತ್ತು ಅಭಿಪ್ರಾಯ ಮೂಡಿಸುವುದು ಈ ಮೂಲಕ ಜನ, ರಾಜಕೀಯ ವ್ಯವಹಾರಗಳಲ್ಲಿ ಹಾಗೂ ಸಾಂಸ್ಕೃತಿಕ ವಿಷಯಗಳಲ್ಲಿ ಭಾಗಿಯಾಗುವ ಹಾಗೆ ಮಾಡುವುದು. ತಮ್ಮ ಸುತ್ತ ಏನಾಗುತ್ತಿದೆ ಎಂಬ ಅಂಶವನ್ನು ಓದುಗರಿಗೆ ತಿಳಿಸಿಕೊಡುವುದೇ ಪತ್ರಿಕೋದ್ಯಮದ ಉದ್ದೇಶ. ಆದ್ದರಿಂದ ಸುದ್ದಿ ಸಂಗ್ರಹ ಬರವಣಿಗೆ, ಸಂಪಾದನೆ ಮತ್ತು ವಸ್ತು ಸಂಗತಿಗಳ ವ್ಯಾಖ್ಯಾನ. ವರದಿ ಇದರಲ್ಲಿ ನಿರತರಾದವರೆಲ್ಲರೂ ಪತ್ರಿಕೋದ್ಯಮಿಗಳೆಂದು ವಿಶಾಲಾರ್ಥದಲ್ಲಿ ಹೇಳಿರಬಹುದು. ಡಾ.

ಜಿ.ಬಿ.ವಿಸಾಜಿ ಅವರು ಕವನ, ಕಥೆ, ವ್ಯಕ್ತಿಚಿತ್ರ, ಪ್ರಬಂಧ, ಸಂಪಾದನೆ ಮುಂತಾದ ಸಾಹಿತ್ಯ ಕ್ಷೇತ್ರದಲ್ಲಿ ಕಾರ್ಯಮಾಡಿರುವುದಲ್ಲದೆ ಪತ್ರಿಕೋದ್ಯಮದಲ್ಲಿಯು ಕೂಡ ಅವರ ಸೇವೆಯನ್ನು ಮರೆಯಲಾಗುವುದಿಲ್ಲ.

ವಿದ್ಯಾರ್ಥಿ ಜೀವನದಲ್ಲಿಯೇ ಜಿ.ಬಿ. ವಿಸಾಜಿ ಅವರು ಶಾಲಾವಾರ್ಷಿಕ ಪತ್ರಿಕೆಗಳ ಆಕರ್ಷಣೆಗೆ ಒಳಗಾದರು. ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಗುಲಬರ್ಗಾ ಅಸಫಗಂಜ ಮಿಡ್ಲಸ್ಕೂಲು ವಾರ್ಷಿಕ ಪತ್ರಿಕೆ ಶರಣ ಬಸವೇಶ್ವರ ಪ್ರೌಢ ಶಾಲೆಯ ವಾರ್ಷಿಕ ಪತ್ರಿಕೆ ನೋಡಿ ಇಂಥ ಪತ್ರಿಕೆಗಳಲ್ಲಿ ತಮ್ಮ ಲೇಖನಗಳು ಬರಬೇಕೆಂದು ಬಯಸಿದ್ದರು. ಸರ್ಕಾರಿ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ ಕಲಬುರ್ಗಿಯ "ಮ್ಯಾಗಝೀನ" (೧೯೬೩) ರಲ್ಲಿ ಅವರ ಕವನ "ಪ್ರಶ್ನೋತ್ತರ" ಪ್ರಕಟವಾಗಿದೆ. ಆಗ ಅವರು ಬಿ.ಎ. ದ್ವಿತೀಯ ವರ್ಷದಲ್ಲಿ ಓದುತ್ತಿದ್ದರು. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಓದುತ್ತಿದ್ದಾಗ ಹಾಸ್ಟೆಲ ವಿದ್ಯಾರ್ಥಿಗಳ ಮ್ಯಾಗಝೀನ (೧೯೬೬)ದಲ್ಲಿ ಇವರ ಸಣ್ಣಕಥೆ "ಕಂಬನಿ" ಪ್ರಕಟವಾಗಿದೆ. ಅದೇ ವೇಳೆಯಲ್ಲಿ ಕೋಹಿನೂರು ಗೆಳೆಯರ ಬಳಗದ ವತಿಯಿಂದ ನೆಲದನುಡಿ–೧, ನೆಲದನುಡಿ–೨, ವಾರ್ಷಿಕ ಪತ್ರಿಕೆಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಚನ್ನಬಸವೇಶ್ವರ ಕಲಾ ಮತ್ತು ವಿಜ್ಞಾನ ಕಾಲೇಜು ಭಾಲ್ಕಿಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ "ಶಾಂತಿಕಿರಣ" ಪ್ರಥಮ ಮ್ಯಾಗಝೀನ (೧೯೭೦–೭೧) ಇವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟವಾಯಿತು. ಬೀದರ ಜಿಲ್ಲಾ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ(೧೯೯೪) ದ ಸವಿನೆನಪಿನ ಸಂಚಿಕೆಯಾದ "ಚೆಂಬೆಳಕು" ಇವರ ಪ್ರಧಾನ ಸಂಪಾದಕತ್ವದಲ್ಲಿಯೆ ಪ್ರಕಟವಾಗಿದೆ. "ವಿಶ್ವಕಲ್ಯಾಣ" ವಾರ ಪತ್ರಿಕೆಯಲ್ಲಿ ಇವರ ಅನೇಕ ಲೇಖನಗಳು ಕವನಗಳು ಪ್ರಕಾಶನಗೊಂಡಿವೆ. ಗುರುರಾಜ ಹೊಸಕೋಟಿ, ಚಿತ್ರನಟಿ ವಿಜಯಕಲಾ, ಚಿತ್ರಕಲಾವಿದ ಎಂ.ಬಿ. ಲೋಹಾರ ಮತ್ತು ಕೃಷಿತಜ್ಞ ನರಸಿಂಗರಾವ ಘರಕೆ ಅವರ ಸಂದರ್ಶನಗಳು ಕ್ರಮವಾಗಿ ಗುಲಬರ್ಗಾದ ಶಾಸನ, ಗ್ರಿನೋಬಲ್ಸ್, ವಿಶ್ವಕಲ್ಯಾಣ, ಉದಯವಾಣಿ (ಮಂಗಳೂರು), ಮತ್ತು ಉತ್ತರ ಕರ್ನಾಟಕದಲ್ಲಿ ಪ್ರಕಟವಾಗಿದೆ. ವಿಚಾರವಾಹಿನಿ ಹಾಗೂ ಚೆಂಬೆಳಕು ಕೈಬರಹದ ಪತ್ರಿಕೆಗಳನ್ನು ಅವರು ಹೊರತಂದಿರುವರು.

ಡಾ. ಜಿ.ಬಿ.ವಿಸಾಜಿ ಅವರು ಪತ್ರಿಕೋದ್ಯಮ ಕ್ಷೇತ್ರಕ್ಕೆ ತನ್ನದೆ ಆದಂತಹ ವಿಶಿಷ್ಟ ಕೊಡುಗೆಯನ್ನು ಕೊಟ್ಟಿದ್ದಾರೆ ಅಂತೆಯೆ ಸಾಕಷ್ಟು ಪತ್ರಿಕೆಗಳಲ್ಲಿ ಅವರ ಲೇಖನಗಳು ಕಂಡುಬರುತ್ತವೆ.

ಕಾಲೇಜಿನಲ್ಲಿ ನಡೆದ ಸಮಾರಂಭಗಳ ಕನ್ನಡ ವರದಿ ತಯಾರಿಸಿ, ಅವುಗಳ ಭಾಷಾಂತರ ಮರಾಠಿ, ಹಿಂದಿ, ಇಂಗ್ಲೀಷ ಅಧ್ಯಾಪಕರಿಂದ ಮಾಡಿಸಿ ಅವುಗಳನ್ನು ವಿವಿಧ ಪತ್ರಿಕೆಗಳಿಗೆ ರವಾನಿಸುವ ಬಂದ ಸುದ್ದಿಗಳನ್ನು ಕತ್ತರಿಸಿ ಸೂಚನಾ ಫಲಕದಲ್ಲಿ ಹಚ್ಚುವ ಮತ್ತು ಅವುಗಳನ್ನು ಫೈಲ್ ಮಡುವ ಕಾರ್ಯ ಪ್ರಿನ್ಸಿಪಾಲ ಎಸ್.ಎಂ. ಕಪ್ಪಿಕೆರಿ ಅವರು ೧೯೬೮ರಲ್ಲಿ ಪ್ರೊ. ಜಿ.ಬಿ.ವಿಸಾಜಿ ಅವರಿಗೆ ವಹಿಸಿದ್ದರು. ಆಗಿನಿಂದ ಸುದ್ದಿ ಬರಹ ಕಾರ್ಯ ಇವರಿಂದ ಪ್ರಾರಂಭವಾಯಿತು.

೧ನೇ ಡಿಸೆಂಬರ ೧೯೭೧ರಂದು "ಶಾಂತಿಕಿರಣ" ವಾರಪತ್ರಿಕೆ ಶಾಂತಿವರ್ಧಕ ಶಿಕ್ಷಣ ಸಂಸ್ಥೆ ಭಾಲ್ಕಿಯಿಂದ ಪತ್ರಿಕೋದ್ಯಮ ಶಿಕ್ಷಣ ಪಡೆದ ಕೆ.ಭೀಮರಾವ ಅವರ ಸಂಪಾದಕತ್ವದಲ್ಲಿ ಪ್ರಾರಂಭವಾಯಿತು. ಆಗ ಪ್ರೊ. ಜಿ.ಬಿ. ವಿಸಾಜಿ ಅವರು ಅವರಿಗೆ ಸಹಾಯಕರಾಗಿ ಕಾರ್ಯಮಾಡಿದರು. ಕೆ.ಭೀಮರಾವ ಬಹಳದಿನ ಉಳಿಯಲಿಲ್ಲ ಆ ಪತ್ರಿಕೆಯ ಹೊಣೆ ಪೂರ್ತಿ ಜಿ.ಬಿ. ವಿಸಾಜಿ ಅವರೇ ನಿರ್ವಹಿಸಿದರು. ಎರಡು ವರ್ಷ ಸತತ ನಡೆಯಿತು. ಅನೇಕ ಉದಯೋನ್ಮುಖ ಬರಹಗಾರರು ನಿರ್ಮಾಣವಾದರು. "ಶಾಂತಿಕಿರಣ" ಪತ್ರಿಕೆ ಮುಂದೆ ಮಾಸಿಕ ಪತ್ರಿಕೆಯಾಯಿತು. ಹಿರೇಮಠ ಸಂಸ್ಥಾನದಿಂದ ದ್ವೈಮಾಸಿಕ ಪತ್ರಿಕೆ ಪ್ರಕಟವಾಗುತ್ತಿತ್ತು. ಶಾಂತಪ್ಪಾ ದೇವರಾಯ ಸಹಯಕರಾಗಿ ಜಿ.ಬಿ. ವಿಸಾಜಿ ಅವರಿಗೆ ನೆರವಾದರು. ಈ ಪತ್ರಿಕೆಯ ಲೇಖನ, ಮುದ್ರಣವನ್ನು ಶ್ರೇಷ್ಠ ಸಾಹಿತಿ ಸಿದ್ಧಯ್ಯ ಪುರಾಣಿಕರು ಹೊಗಳಿ ಪತ್ರ ಬರೆದಿದ್ದಾರೆ. ಈ ಪತ್ರಿಕೆಯಲ್ಲಿ ಜಿ.ಬಿ.ವಿಸಾಜಿ ಅವರು ಅನೇಕ ಕವನ ಲೇಖನ ಪುಸ್ತಕ ವಿಮರ್ಶೆಗಳನ್ನು ಬರೆದಿರುವರು.

ಇದೇ ಸಂದರ್ಭದಲ್ಲಿ ಅವರು ಕಲಬುರ್ಗಿಯಿಂದ ಹೊರಡುವ "ಗ್ರಿನೋಬಲ್ಸ" ಕನ್ನಡ ದಿನಪತ್ರಿಕೆಯ ಭಾಲ್ಕಿ ತಾಲ್ಲೂಕಿನ ವರದಿಗಾರರಾಗಿ ಆಯ್ಕೆಯಾದರು. ಮುಂದೇ ೨ಮೇ ೧೯೮೩ರಿಂದ ಪ್ರಜಾವಾಣಿ ವರದಿಗಾರರಾದರು. ಅಂದಿನಿಂದ ವರದಿಗಳು "ಪ್ರಜಾವಾಣಿ"ಯಲ್ಲಿ ಬರಲು ಪ್ರಾರಂಬಿಸಿದವು.

ಕಲಾರಂಬ, ವಾಚಕರವಾಣಿ, ಕುಂದುಕೊರತೆ, ಕರ್ನಾಟಕ ದರ್ಶನ, ನಾಡು ನುಡಿ ಸುವರ್ಣ ಸ್ವಾತಂತ್ರ, ಕರ್ನಾಟಕದ ಕಹಳೆ, ಗ್ರಾಮೀಣ ಸುದ್ಧಿ ಸಾರ, ಜಿಲ್ಲಾ ಸುದ್ಧಿ ಸೊಗಡು, ಕೃಷಿರಂಗ ಬಾಲ್ಕಿ, ತಾಲ್ಲೂಕು ವಾರ್ತಾ ಪತ್ರ, ತಾಲ್ಲೂಕು ವಾರ್ತೆ ಇತ್ಯಾದಿ ವಿಭಾಗಗಳಲ್ಲಿ ಡಾ. ಜಿ.ಬಿ.ವಿಸಾಜಿ ಅವರ ಬರಹಗಳು ಪ್ರಕಟವಾಗಿವೆ.

ಡಾ. ಜಿ.ಬಿ. ವಿಸಾಜಿ ಅವರ ಕವನ, ಲೇಖನಗಳು ತುಷಾರ, ವಿಜಯವಾಣಿ, ಕರ್ಮವೀರ, ಯುವ ಕರ್ನಾಟಕ, ಜೀವನ ವಿಕಾಸ, ಶೂದ್ರ, ಪರಂಜ್ಯೋತಿ, ಕಲ್ಯಾಣಕಿರಣ, ಪ್ರಜಾವಾಣಿ, ವಿಶ್ವಕಲ್ಯಾಣ, ಸಂಕ್ರಮಣ, ಗ್ರಿನೋಬಲ್ಸ, ಕಾಲ, ಅಭಿರುಚಿ, ಚ-ಪತ್ರಿಕೆ ಶಾಂತಿಕಿರಣ, ಖಡ್ಗೆ ಪತ್ರಿಕೆ, ಉತ್ತರ ಕರ್ನಾಟಕ ಪ್ರಜಾಜ್ಯೋತಿ ರತಿ ವಿಜ್ಞಾನ, ಶಾಸನ, ಉದಯ ಕನ್ನಡ ತಾಯಿ, ಮೈತ್ರಿ, ಖ್ಯಾತಿ ನವಕಲ್ಯಾಣ, ಕೆಸರಿಗರ್ಜನೆ, ಕನ್ನಡ ರತ್ನ, ಆಪ್ತ ಸಹಾಯಕ, ಅನುಭವ, ಜನದನಿ, ಪಬ್ಲಿಕ, ಜನಪ್ರಜ್ಞೆ ಗ್ರಾಮಾಭಿಯಾನಿ ಸಪ್ತಸ್ವರ ಬೀದರ ಜಂಗ ಅಗ್ನಿ ಅಂಕುರ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಬೀದರದ "ಜನದನಿ" ಪತ್ರಿಕೆಯಲ್ಲಿ ಇವರ ಶ್ರೀ ಚನ್ನಬಸವ ಪಟ್ಟದ್ದೇವರು ಭಾಲ್ಕಿ" ಜೀವನ ಚರಿತ್ರೆ ಧಾರಾವಾಹಿಯಾಗಿ ಪ್ರಕಟವಾಗಿದೆ. ಈ ಪುಸ್ತಕವನ್ನು ಈಗ ಶ್ರೀ ಸ್ವಾಮಿ ರಮಾನಂದ ತೀರ್ಥ ಮರಾಠಿವಾಡಾ ವಿಶ್ವವಿದ್ಯಾಲಯದಲ್ಲಿ ಪಠ್ಯಪುಸ್ತಕವಾಗಿ ಓದಲಾಗುತ್ತಿದೆ. ಬೀದರದ "ಉತ್ತರ ಕರ್ನಾಟಕ" ದಿನ ಪತ್ರಿಕೆಯಲ್ಲಿ ಕರ್ನಾಟಕದ ಶಿಸುಸಾಹಿತಿಗಳ ಪರಿಚಯ ಮಾಲಿಕೆ ಪ್ರಕಟವಾಗಿ ಅನೇಕ ಗಣ್ಯರಿಂದ ಪ್ರಶಂಸೆ ಪತ್ರಗಳು ಬಂದಿವೆ.

ಪ್ರಜಾವಾಣಿ, ಡೆಕ್ಕನಹೆರಾಲ್ಡ್, ಪತ್ರಿಕೆಗಳ ಪರವಾಗಿ ಎರಡು ಸಲ ಬೆಂಗಳೂರಿನಲ್ಲಿ ಪತ್ರಿಕೋದ್ಯಮ ತರಬೇತಿ ಪಡೆದಿರುವರು. ಗುಲಬರ್ಗಾದಲ್ಲಿ ೧೯೮೭ ಕರ್ನಾಟಕ ಪತ್ರಿಕಾ ಅಕಾಡೆಮಿ ನಡೆಸಿದ "ನಗರ ಹಾಗೂ ಗ್ರಾಮಾಂತರ ಪತ್ರಕರ್ತರ ತರಬೇತಿ ಶಿಬಿರದಲ್ಲಿ ಪ್ರೊ. ಜಿ.ಬಿ.ವಿಸಾಜಿ ಅವರು ಭಾಗವಹಿಸಿದ್ದಾರೆ. ಧಾರವಾಡದಲ್ಲಿ ಪತ್ರಿಕೋದ್ಯಮ ವಿಭಾಗದಲ್ಲಿ (೧೯೯೨) ನಡೆದ "ವಿಜ್ಞಾನ ಸಂವಹನ ಕಾರ್ಯಾಗಾರದಲ್ಲಿ ಜಿ.ಬಿ. ವಿಸಾಜಿ ಅವರು ದೆಹಲಿಯ ಪತ್ರಿಕೋದ್ಯಮ ಶಾಲೆಯಿಂದ ಹಿಂದಿ ಮಾಧ್ಯಮದಲ್ಲಿ ಪತ್ರಿಕೋದ್ಯಮ ಶಿಕ್ಷಣ ಪಡೆದವರಾಗಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ರಾಜೋಳೆ ಸಂಘರ್ಷ ಕನ್ನಡ ದಿನ ಪತ್ರಿಕೆಯ ಗೌರವ ಸಂಪಾದಕರಾಗಿ (೨೦೦೨–೦೩) ಕಾರ್ಯ ಮಾಡಿದ್ದಾರೆ. ಈ ಪತ್ರಿಕೆ ಪ್ರತಿದಿವಸ ನಾಲ್ಕು ಪುಟಗಳಲ್ಲಿ ಮುದ್ರಣವಾಗುತ್ತಿತು. ಪ್ರತಿದಿವಸ ಸಂಪಾದಕೀಯ ಒಂದು ಚಿಂತನ ಒಂದು ಅಗ್ರ ಲೇಖನ ಲೇಖಕರ ಪರಿಚಯ ಕೊಡಲಾಗುತ್ತಿತ್ತು. ವಾಚಕರ ವಾಣಿಗೆ ಸ್ಥಾನ ಕಲ್ಪಿಸಲಾಗಿತ್ತು. ಕ್ರೀಡೆಗಾಗಿ ಸ್ಥಳ ಕಾಯ್ದಿರಿಸಲಾಗಿತ್ತು. ಸಾಪ್ತಾಹಿಕ ಪುರವಣೆಯನ್ನು ಹೊರತರಲಾಗಿತ್ತು. ರಾಷ್ಟ್ರ, ರಾಜ್ಯ, ಜಿಲ್ಲೆ ತಾಲ್ಲೂಕು ಹಾಗೂ ಗ್ರಾಮೀಣ ಸುದ್ದಿಗಳಿಗೆ ಹೆಚ್ಚಿನ ಸ್ಥಳವಕಾಶ ನೀಡಲಾಗಿತ್ತು. ಓದುಗರು ಇದರಿಂದ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಪೂರಕವಾಗಿತ್ತು. ಬೀದರ ಜಿಲ್ಲೆಯಲ್ಲಿಯ ಒಂದು ಮಾದರಿ ಪತ್ರಿಕೆಯಾಗಿ ಪ್ರಕಟವಾಗುತ್ತಿತ್ತು.

ಹಿರಿಯ ಸಾಹಿತಿ ಡಾ. ಜಿ.ಬಿ. ವಿಸಾಜಿ ಅವರು "ಕೆಂಡ ಸಂಪಿಗೆ" ಅಂತರಜಾಲ ಪತ್ರಿಕೆಯಲ್ಲಿ ಲೇಖನಗಳನ್ನು ಬರೆದು ಅಪ್ರತ್ಯಕ್ಷವಾಗಿ ಸಾಂಸ್ಕೃತಿಕ ರಾಯಭಾರಿಯಂತೆ ಸೇವೆ ಸಲ್ಲಿಸುತ್ತಿದ್ದಾರೆ. "ಕೋಹಿನೂರು ಗ್ರಾಮ ಆಗ ಮತ್ತು ಈಗ" "ಕೋಹಿನೂರ ಪಹಾಡ ಒಂದು ಅಪರೂಪದ ಗ್ರಾಮ" "ಹಳ್ಳಿ ಖಾಸಗಿ ಶಾಲೆಯ ನೆನಪುಗಳು" "ಕರಡ್ಯಾಳ ಸರಳ ಶವ ಸಂಸ್ಕಾರ", "ದೇಗಾಂವ ಹುಲಿ ಓಡಿಸುವ ಜಾತ್ರೆ", "ಗಡಿ ಪ್ರದೇಶದ ಬಾಳು ಗೋಳು", "ನಾವುದಗಿ ಗ್ರಾಮದ ತುಪ್ಪ ಹೋಳಿಗೆ ಜಾತ್ರೆ" ಇತ್ಯಾದಿ ಲೇಖನಗಳನ್ನು ಕೆಂಡ ಸಂಪಿಗೆ ಅಂತರಜಾಲ ಪತ್ರಿಕೆಯಲ್ಲಿ ಪ್ರಸಾರ ಮಾಡಿದ್ದಾರೆ. ಎಷ್ಟೋ ಜನರಿಗೆ "ಬ್ಲಾಗ" ಎಂಬುದೇ ಗೊತ್ತಿಲ್ಲ ಹಿಗಿರುವಾಗ ತಮ್ಮ ಇಳಿವಯಸ್ಸಿನಲ್ಲಿಯೂ ಅಂತರ್ಜಾಲವನ್ನು ಸಮರ್ಥವಾಗಿ ಬಳಸುತ್ತಿರುವ ಅಪರೂಪದ ವ್ಯಕ್ತಿಯಾಗಿದ್ದಾರೆ.

ಸಮಾಜದಲ್ಲಿ ಪತ್ರಿಕೆಗಳ ಪಾತ್ರ ಮಹತ್ವದ್ದಾಗಿದೆ. ನಮ್ಮ ಸುತ್ತ ನಡೆಯುವ ಸಂಗತಿಗಳನ್ನು, ಘಟನೆಗಳನ್ನು, ಪತ್ರಿಕೆಗಳು ನಮಗೆ ತಲುಪಿಸುತ್ತವೆ. ಪತ್ರಿಕೆಗಳು ನಮ್ಮ ಸಮಾಜದ ಸಾಂಸ್ಕೃತಿಕ ಪರಂಪರೆಯನ್ನು ಜೀವಂತವಾಗಿಡುವುದಕ್ಕೂ, ಬೇರೆ ಕಡೆ ಹರಡುವುದಕ್ಕೂ ಸಹಾಯ ಮಡುತ್ತದೆ. ಅಲ್ಲದೆ ಪತ್ರಿಕೆಗಳು ಹೊಸ ಹಾಗೂ ಪ್ರಗತಿಶೀಲ ಆಲೋಚನೆಗಳನ್ನು ಪ್ರಸಾರ

ಮಾಡುವಲ್ಲಿ ಮುಖ್ಯ ಪಾತ್ರವಹಿಸಿವೆ. ಡಾ. ಜಿ.ಬಿ. ವಿಸಾಜಿ ಅವರು ತಮ್ಮ ಅಧ್ಯಯನ, ಅಧ್ಯಾಪನಗಳೊಂದಿಗೆ ಪತ್ರಿಕೋದ್ಯಮದಲ್ಲಿಯೂ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರು ಮುಂಬಯಿಯ "ಸ್ನೇಹ ಸಂಬಂಧ", ತುಮಕೂರಿನ "ಸಿದ್ಧಗಂಗಾ" ಧಾರವಾಡದ "ವಿಶ್ವತೋಮುಖ", ಅರ್ಬಿಟ್ ಸಂಸ್ಥೆಯ "ಜನಸನ್ನಿಧಿ" ಇತ್ಯಾದಿ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದಾರೆ. ಇವರಿಗೆ ಒಂದು ಅತ್ಯುತ್ತಮವಾದ ಸಾಹಿತ್ಯಿಕ ಪತ್ರಿಕೆ ಹೊರತರುವ ಬಯಕೆ ಇದೆ. ಈ ಭಾಗದ ಸಾಹಿತ್ಯಿಕ ಸತ್ವವನ್ನು ಪ್ರಕಟಿಸುವ ಇಲ್ಲಿಯ ಪ್ರತಿಭಾವಂತ ಎಳೆಯ ಸಾಹಿತಿಗಳನ್ನು ಬಳಸುವ ಇಚ್ಛೆಯು ಅವರದ್ದಾಗಿವೆ. ಆದರೆ ಈ ಬಯಕೆ ಈಡೇರಿಸಲು ಇನ್ನು ಅವರಿಂದ ಸಾಧ್ಯವಾಗಿಲ್ಲ.

**ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ :**

ರಾಷ್ಟ್ರೀಯ ಹಸ್ತಪ್ರತಿ ಅಭಿಯಾನ, ಕೇಂದ್ರ ಸರ್ಕಾರ ಸಾಂಸ್ಕೃತಿಕ ವಿಭಾಗ ಇವರು ನಮ್ಮ ಕರ್ನಾಟಕ ರಾಜ್ಯಾದಾದ್ಯಂತ ೨೦೦೫ ನವೆಂಬರ ೨೧ ರಿಂದ ೨೫ರವರೆಗೆ ಹಸ್ತಪ್ರತಿ ಸರ್ವೇಕ್ಷಣೆಯ ಕಾರ್ಯವನ್ನು ಹಮ್ಮಿಕೊಂಡಿದ್ದು ಈ ಕಾರ್ಯಕ್ಕೆ ಡಾ. ಜಿ.ಬಿ. ವಿಸಾಜಿ ಅವರು ಬೀದರ ಜಿಲ್ಲಾ ಸಂಯೋಜಕರನ್ನಾಗಿ ನೇಮಿಸಲಾಗಿತ್ತು. ಸರ್ವೇಕ್ಷಣೆಯ ಉದ್ದೇಶ ಹಸ್ತಪ್ರತಿಗಳ ಸಂಗ್ರಹಗಳು ಸಂಸ್ಥೆಗಳಲ್ಲಿರಲಿ ಅಥವಾ ಖಾಸಗಿ ವ್ಯಕ್ತಿಗಳ ಬಳಿಇರಲಿ ಅವುಗಳನ್ನು, ಗುರುತಿಸಿ ದಾಖಲಾತಿ ಮಾಡಿಕೊಳ್ಳುವುದು. ಪುರಾತನ ತಾಳೆಗರಿಗಳು ಮತ್ತು ಕಾಗದದ ಹಸ್ತಪ್ರತಿಗಳು ನಮ್ಮ ಸಂಪ್ರಾದಾಯಿಕ ಜ್ಞಾನ ಭಂಡಾರಗಳಾಗಿವೆ. ತಮ್ಮ ಹಸ್ತಪ್ರತಿಗಳು ತಮ್ಮಲ್ಲಿಯೆ ಇರುತ್ತವೆ. ಅವುಗಳನ್ನು ವಶಪಡಿಸಿಕೊಳ್ಳುವುದು ಅಭಿಯಾನದ ಉದ್ದೇಶ ಖಂಡಿತ ಅಲ್ಲ. ಅವುಗಳ ವೈಜ್ಞಾನಿಕ ಸಂರಕ್ಷಣೆಯಲ್ಲಿ ಸಹಾಯ ಮಾಡಲಾಗುತ್ತದೆ. ಈ ಯೋಜನೆಗೆ ಸರ್ವೇಕ್ಷಕರೊಡನೆ ಸಹಕರಿಸಿ ಅವರಿಗೆ ತಮ್ಮ ಹಸ್ತಪ್ರತಿಗಳನ್ನು ತೋರಿಸಿ ದಾಖಲಾತಿ ಮಾಡಿಕೊಳ್ಳಲು ವಿನಂತಿಸಲಾಗಿತ್ತು.

ಡಾ. ಜಿ.ಬಿ. ವಿಸಾಜಿ ಅವರನ್ನು ರಾಷ್ಟ್ರೀಯ ಹಸ್ತಪ್ರತಿ ಅಭಿಯಾನದ ಬೀದರ ಜಿಲ್ಲಾ ಸಂಯೋಜಕರನ್ನಾಗಿ ದಿನಾಂಕ ೨೮/೦೭/೨೦೦೫ ರಂದು ರಾಜ್ಯದ ಸಂಯೋಜಕರಾದ ಶ್ರೀ ಎಸ್. ಸುಬ್ಬರಾಮನ ಅವರು ನೇಮಿಸಿದ್ದಾರೆ. ರಾಜ್ಯದ ಎಲ್ಲಾ ಜಿಲ್ಲಾ ಸಂಯೋಜಕರ ಸಭೆಯನ್ನು ಬೆಂಗಳೂರಿನಲ್ಲಿ ಚಿತ್ರಕಲಾ ಪರಿಷತ್ತಿನಲ್ಲಿ ಕರೆದು ಜಾಗೃತಿ ಕಾರ್ಯಕ್ರಮದ ತರಬೇತಿ ನೀಡಲಾಯಿತು. ೧೦/೦೯/೨೦೦೫ರಿಂದ ಜಿಲ್ಲೆಯ ಸಾರ್ವಜನಿಕ ಸ್ಥಳಗಳಲ್ಲಿ, ಶಾಲಾ-ಕಾಲೇಜುಗಳಲ್ಲಿ ಸರ್ಕಾರಿ ಮತ್ತು ಖಾಸಗಿ ಕಾರ್ಯಾಲಯಗಳಲ್ಲಿ ಜಾಗೃತಿ ಮೂಡಿಸುವ ಭಿತ್ತಿ ಪತ್ರಗಳನ್ನು ಅಂಟಿಸುವ ಕಾರ್ಯ ಪ್ರಾರಂಭಿಸಲಾಯಿತು. ರಾಷ್ಟ್ರಮಟ್ಟದಲ್ಲಿಯು, ಜಿಲ್ಲಾ ಮಟ್ಟದಲ್ಲಿಯೂ ಪ್ರಸಾರವಾಗುವಂತೆ ಈ ಕಾರ್ಯದ ಬಗ್ಗೆ ಜಾಹೀರಾತುಗಳನ್ನು ನೀಡಿ ಪತ್ರಿಕೆಗಳಲ್ಲಿ ಪ್ರಕಟಿಸಲಾಯಿತು. ದಿನಾಂಕ ೦೬/೧೧/೨೦೦೫ರಂದು ಬೀದರ ಜಿಲ್ಲೆಯ ಮುದ್ದಣ್ಣ ಕಾಂಪ್ಲೆಕ್ಸನಲ್ಲಿ ಜಿಲ್ಲಾ ಸರ್ವೇಕ್ಷಕರಿಗೆ ಒಂದು ದಿನದ ತರಬೇತಿ ಕಾರ್ಯಕ್ರಮ ನೀಡಲಾಗಿತ್ತು. ಪ್ರತಿಯೊಂದು ತಾಲ್ಲೂಕಿನಿಂದ ಹತ್ತು ಜನ

ಸರ್ವೇಕ್ಷಕರನ್ನು ಆಯ್ಕೆ ಮಾಡಲಾಗಿತ್ತು. ಸರ್ವೇಕ್ಷಕರಿಗೆ ತರಬೇತಿ ನೀಡಲು ವಿಷಯ ತಜ್ಞರಾದ ಡಾ. ವ್ಹಿ.ಜಿ. ಭಂಡೆ, ಶ್ರೀ ವಿಶ್ವನಾಥಯ್ಯ ಮಠಪತಿ ಅವರನ್ನು ನೇಮಿಸಲಾಗಿತ್ತು. ಎಲ್ಲರಿಗೂ ಭಿತ್ತಿ ಪತ್ರಗಳನ್ನು, ಡಾಟಾ ಸೀಟ್‌ಗಳನ್ನು (ದಾಖಲಾತಿ ಪತ್ರಗಳು), ಮತ್ತು ವಿನಂತಿ ಪತ್ರಗಳನ್ನು ವಿತರಿಸಲಾಯಿತು. ಅವರಿಗೆ ಗುರುತಿನ ಚೀಟಿಗಳನ್ನು ಕೊಡಲಾಯಿತು. ಸರ್ವೇಕ್ಷಕರ ಸಂಶಯಗಳ್ಳಗೆ ಪರಿಹಾರ ನೀಡಲಾಯಿತು.

ಸಾರ್ವಜನಿಕರಲ್ಲಿ ಜಾಗೃತಿಯನ್ನುಂಟು ಮಾಡುವ ಸಲುವಾಗಿ ಭಾಲ್ಕಿಯ ಮೌನೇಶ್ವರ ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಪಥ ಸಂಚಲನ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಈ ಪಥ ಸಂಚಲನೆ ಭಾಲ್ಕಿ ಪಟ್ಟಣದ ಮುಖ್ಯ ಬೀದಿಗಳಲೆಲ್ಲ ಕೈಗೊಳ್ಳಲಾಯಿತು. ದಿನಾಂಕ ೮/೧೧/೨೦೦೫ರಂದು ಹಸ್ತಪ್ರತಿ ಜಾಗೃತಿಯ ಅಭಿಯಾನದ ಸಭೆಯನ್ನು ಸರ್ಕಾರಿ ಕನ್ಯಾ ಹಿರಿಯ ಪ್ರಾಥಮಿಕ ಶಾಲೆ ಭಾಲ್ಕಿಯಲ್ಲಿ ಶ್ರೀ ವೀರಶೆಟ್ಟಿ ಬಾವಗೆ ಅವರ ಅಧ್ಯಕ್ಷತೆಯಲ್ಲಿ ನೆರವೇರಿತು. ಶ್ರೀಮತಿ ಸುನಿತಾ ಮಮ್ಮಾ ಅವರು ದೀಪ ಬೆಳಗಿಸುವ ಮೂಲಕ ಸಭೆಯನ್ನು ಉದ್ಘಾಟಿಸಿದರು. ವಿಷಯ ತಜ್ಞರಾದ ಪ್ರೊ. ಎಸ್.ವಿ. ಕಾಮಣ್ಣ ಮತ್ತು ಶ್ರೀ ಅಶೋಕ ಮೈನಾಳೆ ವಿಶೇಷ ಉಪನ್ಯಾಸವನ್ನು ನೀಡಿದರು. ರಾಷ್ಟ್ರೀಯ ಹಸ್ತಪ್ರತಿ ಅಭಿಯಾನದ ಬೀದರ ಜಿಲ್ಲಾ ಸಂಯೋಜಕರಾದ ಡಾ. ಜಿ.ಬಿ. ವಿಸಾಜಿ ಅವರು ಪ್ರಾಸ್ತಾವಿಕವಾಗಿ ಮಾತಾಡಿ ತಾಡೋಲೆ ಪ್ರತಿಗಳು ಮತ್ತು ಹಸ್ತಪ್ರತಿಗಳನ್ನು ಪ್ರದರ್ಶಿಸಿ ಅವುಗಳ ಮಹತ್ವವನ್ನು ವಿವರಿಸಿದರು. ಸರ್ವೇಕ್ಷಕರ ಕಾರ್ಯದ ಬಗ್ಗೆ ತಿಳುವಳಿಕೆ ನೀಡಿದರು. ಭಾಲ್ಕಿ ತಾಲ್ಲೂಕಿನ ಎಲ್ಲಾ ಸರ್ವೇಕ್ಷಕರು ಈ ಸಭೆಯಲ್ಲಿ ಭಾಗವಹಿಸಿದರು.

ದಿನಾಂಕ ೧೬/೧೧/೨೦೦೫ ರಂದು ಬಸವಕಲ್ಯಾಣ ತಾಲ್ಲೂಕಿನ ಗೋರ್ಟಾ(ಬಿ) ಗ್ರಾಮದ ಗುರುಪಾದ ಶಿವಾಚಾರ್ಯ ಪ್ರೌಢ ಶಾಲೆಯಲ್ಲಿ ಹಸ್ತಪ್ರತಿ ಅಭಿಯಾನ ಜಾಗೃತಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಶ್ರೀ ಪಂಚಾಕ್ಷರಯ್ಯ ಹಿರೇಮಠ ಅವರು ಸಭಾಧ್ಯಕ್ಷರಾಗಿದ್ದರು. ವಿಷಯ ತಜ್ಞರಾದ ವೀರಣ್ಣ ಕುಂಬಾರ ಮತ್ತು ಪ್ರೊ. ಎಸ್.ವ್ಹಿ. ಮಠಪತಿ ವಿಶೇಷ ಉಪನ್ಯಾಸ ನೀಡಿದರು. ತಾಡೋಲೆ ಪ್ರತಿಗಳನ್ನು ಹಸ್ತಪ್ರತಿಗಳನ್ನು ಪ್ರದರ್ಶಿಸಲಾಯಿತು. ಬಸವಕಲ್ಯಾಣ ತಾಲ್ಲೂಕಿನ ಎಲ್ಲಾ ಸರ್ವೇಕ್ಷಕರಿಗೆ ಈ ಸಭೆಯಲ್ಲಿ ಭಾಗವಹಿಸಿದರು. ಬೀದರ ಜಿಲ್ಲಾ ಸಂಯೋಜಕರಾದ ಡಾ. ಜಿ.ಬಿ. ವಿಸಾಜಿ ಅವರು ಎಲ್ಲಾ ಸರ್ವೇಕ್ಷಕರು ಈ ರಾಷ್ಟ್ರೀಯ ಕಾರ್ಯದಲ್ಲಿ ಉತ್ಸಾಹದಿಯದ ಭಾಗವಹಿಸಲು ತಿಳಿಸಿದರು.

ದಿನಾಂಕ ೨೧/೧೧/೨೦೦೫ರಂದು ಔರಾದ ತಾಲ್ಲೂಕಿನ ಸರ್ವೇಕ್ಷಕರಲ್ಲಿ ಜಾಗೃತಿಯನ್ನು ಮೂಡಿಸುವುದಕ್ಕಾಗಿ ಕಮಲನಗರದ ಶಾಂತಿವರ್ಧಕ ಸಂಯುಕ್ತ ಪದವಿಪೂರ್ವ ಕಾಲೇಜಿನಲ್ಲಿ ಪ್ರಾಚಾರ್ಯ ಎಸ್.ಬಿ. ಜಾಂತೆ ಅವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮ ನೆರವೇರಿಸಲಾಯಿತು. ಪ್ರೊ. ಅಶೋಕ ಮೈನಾಳೆ ಮತ್ತು ವೀರಣ್ಣ ಕುಂಬಾರ ಅವರು ವಿಷಯ ತಜ್ಞರಾಗಿ ವಿಶೇಷ ಉಪನ್ಯಾಸ ನೀಡಿದರು. ಜಿಲ್ಲಾ ಸಂಯೋಜಕರಾದ ಡಾ. ಜಿ.ಬಿ. ವಿಸಾಜಿ ಅವರು ಬೀದರ ಜಿಲ್ಲಾ ರಾಷ್ಟ್ರೀಯ ಹಸ್ತಪ್ರತಿ ಅಭಿಯಾನವನ್ನು ಉದ್ಘಾಟಿಸಿದರು.

ದಿನಾಂಕ ೨೨/೧೧/೨೦೦೫ರಂದು ಹುಮನಾಬಾದ ತಾಲ್ಲೂಕಿನ ಸರ್ವೇಕ್ಷಕರಿಗಾಗಿ ದುಬಲಗುಂಡಿಯ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಪ್ರಾಚಾರ್ಯ ಆರ್.ಎಂ. ಬಿರಾದಾರ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಹಸ್ತಪ್ರತಿ ಅಭಿಯಾನದ ಜಾಗೃತಿ ಕಾರ್ಯಕ್ರಮ ಏರ್ಪಡಿಸಲಾಯಿತು. ಪ್ರೊ. ಎಸ್.ವ್ಹಿ. ಕಾಮಣ್ಣ, ಪ್ರೊ. ಅಶೋಕ ಮೈನಾಳೆ ವಿಷಯ ತಜ್ಞರು ವಿಶೇಷ ಉಪನ್ಯಾಸ ನೀಡಿದರು. ಜಿಲ್ಲಾ ಸಂಯೋಜಕರಾದ ಡಾ. ಜಿ.ಬಿ. ವಿಸಾಜಿ ಅವರು ಹಸ್ತಪ್ರತಿಗಳು ದೊರಕುವ ಬಗ್ಗೆ ಮಾಹಿತಿಯನ್ನು ತಿಳಿಸಬೇಕೆಂದು ಭಾಗವಹಿಸಿದವರಲ್ಲಿ ವಿನಂತಿಸಿದರು. ಶ್ರೀ ವೀರಣ್ಣ ಕುಂಬಾರ, ಡಾ. ಶ್ರೀನಿವಾಸ ಬೇಂದ್ರೆ, ಸಂತೋಷ ಹಡಪದ ಮತ್ತು ಹುಮನಾಬಾದ ತಾಲ್ಲೂಕಿನ ಎಲ್ಲಾ ಸರ್ವೇಕ್ಷಕರು ಕಾಲೇಜಿನ ಶಿಕ್ಷಕರ ಸಿಬ್ಬಂದಿ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

ಈ ಸರ್ವೇಕ್ಷಣ ಕಾರ್ಯದಲ್ಲಿ ೫೦೦ ಹಸ್ತಪ್ರತಿಗಳನ್ನು ದಾಖಲಿಸಿಕೊಳ್ಳಲಾಯಿತು. ಈ ಕಾರ್ಯಕ್ಕಾಗಿ ಎಲ್ಲ ಸರ್ವೇಕ್ಷಕರಿಗೆ ಓ.ಓ.ಡಿ. ಸೌಲಭ್ಯ ಕೊಡಲಾಗಿತ್ತು. ಗುರುತಿನ ಚೀಟಿ ಒದಗಿಸಲಾಗಿತ್ತು. ಸರ್ವೇಕ್ಷಕರಿಗೆ ಮಾರ್ಗದರ್ಶಕ ವಿವರ, ಕಾಪಾಡಬೇಕಾದ ನೀತಿ (code of conduct) ತಿಳಿಸಲಾಗಿತ್ತು. ಮಠ, ಮಸಿದಿ, ಗ್ರಂಥಾಲಯ ಹಾಗೂ ಸಾರ್ವಜನಿಕರಲ್ಲಿರುವ ಹಸ್ತಪ್ರತಿಗಳ ದಾಖಲಾತಿಗಾಗಿ ಕಳಕಳಿಯಿಂದ ವಿನಂತಿಸಿಕೊಳ್ಳಲಾಗಿತ್ತು. ಹಸ್ತಪ್ರತಿಗಳಲ್ಲಿ ಐತಿಹಾಸಿಕ ಮಹತ್ವ ಅಡಗಿದೆ. ಕನ್ನಡ ನಾಡು ಧಾರ್ಮಿಕ, ಕಲೆ, ಸಂಸ್ಕೃತಿ, ಆರ್ಥಿಕ, ವೇದಾಂತ, ಸಾಹಿತ್ಯ, ವಿವಿಧ ವಿಷಯಗಳು ದಾಖಲಾಗಬೇಕಾಗಿದೆ. ಈ ಭವ್ಯ ಸಂಪತ್ತು ದುಸ್ಥಿತಿಯಲ್ಲಿತ್ತು. ವಿನಾಶದ ಅಂಚಿನಲ್ಲಿದ್ದ ಪ್ರಮುಖ ದಾಖಲೆಗಳು ಕರ್ನಾಟಕದಾದ್ಯಂತ ಮೂಲೆ ಗುಂಪಾಗಿವೆ. ಈ ಎಲ್ಲಾ ದಾಖಲೆಗಳ ಸಂರಕ್ಷಣ ಕಾರ್ಯವು ತುರ್ತಾಗಿ ಆಗಬೇಕಾಗಿದೆ. ನಮ್ಮ ಸಾಂಪ್ರದಾಯಿಕ ಜ್ಞಾನ ಭಂಡಾರ, ಸಾಂಸ್ಕೃತಿಕ ಸಂಪನ್ಮೂಲಗಳಾಗಿರುವ ಕರ್ನಾಟಕದ ರಾಜ್ಯದ ಹಸ್ತಪ್ರತಿಗಳನ್ನು ಗುರುತಿಸಿ ಸಕ್ರಮವಾಗಿ ದಾಖಲಾತಿ ಮಾಡುವ ಉನ್ನತ ದೇಶ ಸೇವೆಯಾಗಿದೆ. ಈ ಕಾರ್ಯಕ್ಕಾಗಿ ಸಂಚರಿಸುತ್ತಿದ್ದಾಗ ಡಾ.ಜಿ.ಬಿ. ವಿಸಾಜಿ ಅವರ ಮೇಲೆ ಬೀದರದ ಮಹಮ್ಮದ ಗವಾನ ಮೆಮೋರಿಯಲ್ ಸಾರ್ವಜನಿಕ ಉರ್ದು ಗ್ರಂಥಾಲಯದ ಅಪಾರ ಪ್ರಭಾವ ಬೀರಿದೆ. ಆ ಗ್ರಂಥಾಲಯದಲ್ಲಿ ೫೦ ಸಾವಿರ (೫೦,೦೦೦) ಪುಸ್ತಕಗಳು ಮತ್ತು ಉರ್ದು ಪತ್ರಿಕೆಗಳನ್ನು ನೋಡಿದಂಗಾಗಿದ್ದಾರೆ. ಈ ಗ್ರಂಥಾಲಯಕ್ಕೆ ಮುಂಬಯಿ, ದೆಹಲಿ, ಹೈದ್ರಾಬಾದ, ಲಕ್ನೋ ಮುಂತಾದ ಪಟ್ಟಣಗಳಿಂದ ಸಂಶೋಧಕರು ಆಗಮಿಸಿ ಮಾಹಿತಿಗಳನ್ನು ಪಡೆದುಕೊಂಡು ಹೋಗಿದ್ದಾರೆ.

ಹಸ್ತಪ್ರತಿ ದಾಖಲೆ ಮಾಡುತ್ತಿರುವಾಗ ಅನೇಕ ಕನ್ನಡ, ಸಂಸ್ಕೃತ, ಮರಾಠಿ, ಹಿಂದಿ, ಉರ್ದು, ಇಂಗ್ಲೀಷ, ಮೋಡಿ ಭಾಷೆಯ ಹಸ್ತಪ್ರತಿಗಳು ದೊರಕಿವೆ. ಅವುಗಳಲ್ಲಿ ವಚನಸಾಹಿತ್ಯಕ್ಕೆ ಸಂಬಂಧಪಟ್ಟ ಗ್ರಂಥಗಳು ಹೆಚ್ಚಾಗಿದ್ದವು. ಶಬ್ದಮಣಿದರ್ಪಣದ ತಾಡೋಲೆ ಪ್ರತಿ ದೊರಕಿದೆ. ಆಯುರ್ವೇದ ಮನಸ್ಮೃತಿ ಔಷಧಗಳ ಹಸ್ತಪ್ರತಿ ಕುದುರೆ ರೋಗಗಳು ಮತ್ತು ಪರಿಹಾರ

ಮಾಹಿತಿಯ ಹಸ್ತಪ್ರತಿ ಶಂಕರ ಕವಿಯ ಕೋಕಶಾಸ್ತ್ರ, ವೇದಮೂರ್ತಿ ರುದ್ರಪ್ಪ ಶಾಸ್ತ್ರೀ ಮಹಾಗಾಂವ ಅವರ ಜ್ಯೋತಿಷ್ಯಶಾಸ್ತ್ರ, ಸಂಗೀತ ಶಾಸ್ತ್ರ, ಅಕ್ಷರ ಫಲ ಜ್ಯೋತಿಷ್ಯ, ಕಂಚು ಶೋಧಿಸುವ ಕ್ರಮ, ಮಳೆ, ಬೆಳೆ, ಭೂಕಂಪ, ತಿಳಿಸುವ ಹಸ್ತಪ್ರತಿ ನಕ್ಷತ್ರ ಗ್ರಹ ಸಂಬಂಧಿ ಗ್ರಂಥ, ನಾನಾರ್ಥ ಶಬ್ದಾವಳಿ, ಸಮಾಧಿಯೋಗ ಪಟ್ಟಿಕೆ, ಹಸ್ತ ಸಾಮುದ್ರಿಕ, ಏಕಾಕ್ಷರ ನಿಘಂಟು, ನೀರು ತೋರಿಸುವ ಶಾಸ್ತ್ರ, ಮಠ ಜ್ಯೋತಿಷ್ಯ ಷಡಕ್ಷರ ದೇವನ ಕಾವ್ಯಗಳು, ಯಂತ್ರಮಂತ್ರಗಳು, ಸರ್ವಜ್ಞನ ವಚನಗಳು, ಬಸವಣ್ಣನವರ ಷಟಸ್ಥಲದ ವಚನಗಳು, ಹರಿಹರ ಮಹತ್ವ, ರಾಘವಾಂಕ ಚಾರಿತ್ರಿಕ ಕಾವ್ಯ, ಸಿದ್ದಾಂತ ಶಿಕಾಮಣಿ, ಬಸವ ಪುರಾಣ, ಅಲ್ಲಮ ಪ್ರಭು ಪುರಾಣ, ಚನ್ನಬಸವಣ್ಣ ಪುರಾಣ ಮುಂತಾದ ಹಸ್ತ ಪ್ರತಿಗಳು ದೊರತಿವೆ.

ಈ ಕಾರ್ಯದಲ್ಲಿ ಜಿಲ್ಲೆಯ ಎಲ್ಲಾ ಸರ್ವೇಕ್ಷಕರು ಉತ್ಸಾಹದಿಂದ ಕಾರ್ಯ ಮಾಡಿದ್ದಾರೆ. ಪತ್ರಿಕೆಗಳು, ವರದಿಗಾರರು, ಅಧಿಕಾರಿಗಳು ಹಾಗೂ ಸಾರ್ವಜನಿಕರು ಜಿಲ್ಲಾ ಸಂಯೋಜಕರೊಂದಿಗೆ ಸಹಕರಿಸಿದ್ದಾರೆ. ಭಾಲ್ಕಿಯ ಶಿವಾಜಿ ಸಂಯುಕ್ತ ಪದವಿಪೂರ್ವ ಕಾಲೇಜಿನಲ್ಲಿ ದಿನಾಂಕ ೨೬-೧೧-೨೦೦೫ ರಂದು ಪ್ರಾಚಾರ್ಯರಾದ ವ್ಹಿ .ಎಚ್. ಪಾಟೀಲ್ ಅವರ ಅಧ್ಯಕ್ಷತೆಯಲ್ಲಿ ಮುಕ್ತಾಯ ಸಮಾರಂಭವನ್ನು ಏರ್ಪಡಿಸಲಾಯಿತು. ಸರ್ವೇಕ್ಷಕರಾದ ಎಸ್.ವ್ಹಿ. ಮಠಪತಿ. ವೀರಣ್ಣ ಕುಂಬಾರ ಅಶೋಕ ಮೈನಾಳೆ ಹಾಗೂ ಶಂಬುಲಿಂಗ ಕಾಮಣ್ಣ ಅವರು ತಮ್ಮ ಅನುಭವಗಳನ್ನು ವ್ಯಕ್ತಪಡಿಸಿದರು. ಜಿಲ್ಲಾ ಸಂಯೋಜಕರಾದ ಡಾ. ಜಿ.ಬಿ. ವಿಸಾಜಿ ಅವರು ಮುಂದೆಯು ದೇಶದ ಅಮೂಲ್ಯ ಆಸ್ತಿಯಾದ ತಾಡೋಲೆ ಮತ್ತು ಹಸ್ತ ಪ್ರತಿಗಳನ್ನು ರಕ್ಷಿಸಬೇಕು ಅವುಗಳ ಮಾಹಿತಿಯನ್ನು ಸಂಬಂದಪಟ್ಟವರಿಗೆ ತಿಳಿಸಬೇಕೆಂದು ಹೇಳಿದರು. ನಂತರ ವಿಸಾಜಿ ಅವರು ಡಾಟಾ ಸೀಟುಗಳನ್ನು ಸಂಗ್ರಹಿಸಿ ಲೆಕ್ಕ ಪತ್ರಗಳನ್ನು ಆಡಿಟ್ ಮಾಡಿಸಿ, ರಾಜ್ಯದ ಸಂಯೋಜಕರಾದ ಶ್ರೀ ಎಸ್. ಸುಬ್ಬರಾಮನ ಅವರಿಗೆ ಕಳುಹಿಸಿದರು. ಇಂತಹ ಒಂದು ಮಹತ್ವದ ರಾಷ್ಟ್ರೀಯ ಕಾರ್ಯದ ಹೋಣೆಯನ್ನು ಹೋರಿಸಿ ಒಂದು ಹೋಸ ಅನುಭವ ಮಾಡಿಕೊಳ್ಳಲು ಕಾರಣರಾದ ರಾಜ್ಯ ಸಂಯೋಜಕ ಶ್ರೀ ಎಸ್. ಸುಬ್ಬರಾಮನ ಅವರಿಗೆ ಡಾ. ಜಿ.ಬಿ. ವಿಸಾಜಿ ಅವರು ಈಗಲು ಕೃತಜ್ಞತೆಯಿಂದ ನೆನೆಯುತ್ತಾರೆ.

**ಇತರ ಸಾಹಿತ್ಯ :**

ಕಥಾ ಸಂಕಲನಗಳು, ಕವನ ಸಂಕಲನಗಳು, ಪ್ರಬಂಧ ಸಂಕಲನಗಳು, ಜೀವನ ಚರಿತ್ರೆಗಳು, ಸಂಪಾದನ ಸಾಹಿತ್ಯ ಪತ್ರಕೋದ್ಯಮ ಸಾಹಿತ್ಯ, ಹಸ್ತಪ್ರತಿ ಅಭಿಯಾನ, ಈ ಪ್ರಕಾರಗಳಿಗೆ ಸೇರದ ಉಳಿದ ಸಾಹಿತ್ಯವನ್ನು ಇತರೆ ಸಾಹಿತ್ಯವೆಂದು ಈ ಭಾಗದಲ್ಲಿ ವಿವೇಚಿಸಲಾಗಿದೆ.

ಡಾ. ಜಿ.ಬಿ. ವಿಸಾಜಿ ಅವರು "ಭಾಲ್ಕಿ ತಾಲ್ಲೂಕು ದರ್ಶನ" (೧೯೮೭) ಪ್ರಕಟಿಸಿದ್ದಾರೆ. ಇದನ್ನು ಐ.ಬಿ.ಎಚ್. ಪ್ರಕಾಶನದವರು ಪ್ರಕಟಿಸಿದ್ದಾರೆ. ಇದರಲ್ಲಿ ಭಾಲ್ಕಿಯ ಬೌಗೋಳಿಕ ಪರಿಚಯವನ್ನು ಕೊಡಲಾಗಿದೆ. ಮಾಂಜ್ರಾ ಮತ್ತು ಕಾರಂಜಾ ಈ ತಾಲ್ಲೂಕಿನ ಮುಖ್ಯ ನದಿಗಳಾಗಿವೆ. ಚುಳುಕಿನಾಲಾ ಈ ತಾಲ್ಲೂಕಿನ ಜಲ ಸಂಪನ್ಮೂಲಗಳಲ್ಲಿ ಒಂದಾಗಿದೆ.

ಖಾನಾಪುರ ಹಳ್ಳಿಯ ಬಳಿ ಮಧುರನಾಲಾ ಹುಟ್ಟಿ ಆಗ್ನೇಯ ದಿಕ್ಕಿನಲ್ಲಿ ಹರೆದಿದೆ. ಈ ತಾಲ್ಲೂಕಿನಲ್ಲಿ ಜಿಂಕೆ, ಮೊಲ, ನವಿಲು, ಕೋಗಿಲೆ, ಹಂದಿ ಅಪರೂಪಕ್ಕೆ ಚಿರತೆ ಕಂಡುಬರುತ್ತವೆ. ಈ ತಾಲ್ಲೂಕಿನಲ್ಲಿ ಆರ್ಥಿಕ ಲಾಭ ತರುವ ಯಾವುದೇ ಖನಿಜಗಳು ಸಿಗುವುದಿಲ್ಲ. ಈ ತಾಲ್ಲೂಕಿನಲ್ಲಿ ಕಪ್ಪು ಭೂಮಿ ಹೆಚ್ಚು ಕೆಲವು ಕಡೆ ಕೆಂಪು ಮಿಶ್ರಿತ ಭೂಮಿ ಫಲವತ್ತಾಗಿದೆ. ಭಾಲ್ಕಿ ತಾಲ್ಲೂಕಿನಲ್ಲಿ ಅನೇಕ ಶಾಸನಗಳು ದೊರಕಿವೆ. ೧೧ನೇ ಶತಮಾನದಲ್ಲಿ ಭಾಲ್ಕಿ ಕಲ್ಯಾಣದ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತು. ಈ ತಾಲ್ಲೂಕಿನ ಮೇಲೆ ೧೨ನೆ ಶತಮಾನದ ಶರಣರ ಪ್ರಭಾವವಾಗಿದೆ. ೧೮೫೭ ರಲ್ಲಿ ಭಾಲ್ಕಿ ಒಳಸಂಚು ದಂಗೆ ಇಲ್ಲಿ ನಡೆದಿದೆ. ಇದು ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಧ್ವನಿಯಾಗಿದೆ. ೧೯೪೭–೪೮ ರಲ್ಲಿ ಈ ಭಾಗದಲ್ಲಿ ರಜಾಕಾರರ ಹಾವಳಿ ಪ್ರಾರಂಭವಾಯಿತು. ೧೯೫೬ ರಲ್ಲಿ ಭಾಲ್ಕಿಯು ಕರ್ನಾಟಕ ರಾಜ್ಯಕ್ಕೆ ಸೇರಿತ್ತು. ಶಿವಶರಣ ಕುಂಬಾರ ಗುಂಡಯ್ಯ ಭಾಲ್ಕಿಯವನಾಗಿದ್ದಾನೆ. ಉರಲಿಂಗ ಪೆದ್ದಿಯ ಮಠವಿದೆ. ಭಾಲ್ಕಿಯಲ್ಲಿ ಒಂದು ಕೋಟೆ ಇದೆ. ಭಾಲ್ಕೇಶ್ವರ ದೇವಾಲಯವಿದೆ.

ಈ ತಾಲ್ಲೂಕಿನಲ್ಲಿ ಅಳವಾಯಿ ಭಾತಂಬ್ರಾ ಬ್ಯಾಲಹಳ್ಳಿ (ಕೆ), ಚಳಕಾಪುರ, ಖಾನಾಪುರ, ಖಟಕ ಚಿಂಚೋಳಿ ನಾವುದಗಿ, ಲಖಣಗಾಂವ ಸಾಯಗಾಂವ, ಸಿದ್ಧೇಶ್ವರ, ತೂಗಾಂವ, ಮುಂತಾದವು ಪ್ರಸಿದ್ಧ ಸ್ಥಳಗಳಾಗಿವೆ. ಜೋಳ, ಗೋಧಿ, ಉದ್ದು, ಹೆಸರು, ತೊಗರಿ, ಕಬ್ಬು ಮುಖ್ಯ ಬೆಳೆಗಳಾಗಿವೆ. ಮೀನುಗಾರಿಕೆ ಅಭಿವೃದ್ಧಿ ಕಾರ್ಯವನ್ನು ಪ್ರಾರಂಭಿಸಲಾಗಿದೆ. ಕೈಗಾರಿಕೆಗಳನ್ನು ಬೆಳೆಸಲು ಪ್ರೋತ್ಸಾಹಿಸಲಾಗುತ್ತಿದೆ. ವಿದ್ಯಾಭ್ಯಾಸ ಕ್ಷೇತ್ರವು ಭರದಿಂದ ಬೆಳೆಯುತ್ತಿದೆ. ಹಿರೇಮಠ ಸಂಸ್ಥಾನ ಜನಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದೆ. ಶಾಂತಿಕಿರಣ ಪತ್ರಿಕೆ ಪ್ರಕಟಿಸಲಾಗುತ್ತಿದೆ. ಇದರ ಪ್ರಧಾನ ಸಂಪಾದಕರಾಗಿ ಡಾ. ಜಿ.ಬಿ. ವಿಸಾಜಿ ಅವರು ಕಾರ್ಯ ಮಾಡುತ್ತಿದ್ದಾರೆ. ಈ ತಾಲ್ಲೂಕಿನಲ್ಲಿ ವಾಣಿಜ್ಯ ಬ್ಯಾಂಕುಗಳು, ಸಹಕಾರ ಸಂಘಗಳು, ಮಾರುಕಟ್ಟೆಗಳು ಜನರ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಹಲವಾರು ಯೋಜನೆಗಳು ಹಾಕಿಕೊಂಡಿದ ಈ ತಾಲ್ಲೂಕಿನಲ್ಲಿ ಸರ್ಕಾರಿ ಆಸ್ಪತ್ರೆಗಳು ಖಾಸಗಿ ವೈದ್ಯರಿದ್ದು ಜನತೆಗೆ ಸೌಲಭ್ಯಗಳನ್ನು ಒದಗಿಸುತ್ತವೆ. ಭಾಲ್ಕಿಯಲ್ಲಿ ರೈಲ್ವೆ ನಿಲ್ದಾಣವಿದ್ದು ಹೈದ್ರಾಬಾದಿನಿಂದ ನಾಂದೇಡ, ಪರಳಿ ವೈಜಿನಾಥವರೆಗು ಸಂಪರ್ಕ ಕಲ್ಪಿಸುತ್ತವೆ. ಇಲ್ಲಿ ಬಸ್ ನಿಲ್ದಾಣವಿದೆ. ಇಲ್ಲಿಂದ ಎಲ್ಲಾ ಕಡೆಗೂ ಸಂಪರ್ಕವಿದೆ. ಇಲ್ಲಿ ಅಂಚೆ ಕಛೇರಿಗಳು, ತಂತಿ ಕಛೇರಿಗಳು ಸೌಲಭ್ಯ ಒದಗಿಸಿದೆ. ಈ ತಾಲ್ಲೂಕಿನಲ್ಲಿ ಸರ್ಕಾರ ಹಲವಾರು ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಂಡಿದೆ. ವಿದ್ಯುಚ್ಛಕ್ತಿ ಸೌಲಭ್ಯ ಒದಗಿಸಿಲಾಗಿದೆ. ಭಾಲ್ಕಿಯಲ್ಲಿ ಡಿ.ವೈ.ಎಸ್.ಪಿ. ಕಛೇರಿ ಇದೆ. ಭಾಲ್ಕಿಯಲ್ಲಿ ನ್ಯಾಯಾಲಯವಿದೆ. ೧೯೫೪ರಲ್ಲಿ ಭಾಲ್ಕಿ ಪುರಸಭೆ ಜಾರಿಗೆ ಬಂದಿದೆ. ೧೯೬೦ರಲ್ಲಿ ಭಾಲ್ಕಿ ತಾಲ್ಲೂಕ ಅಭಿವೃದ್ಧಿ ಮಂಡಳಿ ರಚಿಸಲಾಯಿತು. ಭವಿಷ್ಯದಲ್ಲಿ ಭಾಲ್ಕಿ ತಾಲ್ಲೂಕಿನ ಜನರ ಜೀವನದಲ್ಲಿ ಸಂತೋಷ ಅಭಿವೃದ್ಧಿಗೆ ಸಾಕಷ್ಟು ಅವಕಾಶಗಳು ತೋರುತ್ತಿವೆ.

ಈ ಪುಸ್ತಕದ ಮುಖಪುಟದಲ್ಲಿ ಸಿದ್ದೇಶ್ವರ ಗ್ರಾಮದ ಸಿದ್ದೇಶ್ವರ ದೇವಾಲಯದ ಚಿತ್ರ, ಖಾನಾಪುರದ ಮೈಲಾರ ಮಲ್ಲಣ್ಣ ದೇವಸ್ಥಾನದ ಚಿತ್ರ, ಕುಂಬೇಶ್ವರದ ನಿಂತ ಗಣಪತಿಯ ಚಿತ್ರ ಬಣ್ಣಗಳಲ್ಲಿ ಪ್ರಕಟಿಸಲಾಗಿದೆ. ಈ ಪುಸ್ತಕ ಭಾಲ್ಕಿ ತಾಲ್ಲೂಕಿನ ದರ್ಶನ ಮಾಡಿಸುತ್ತದೆ. ಈ

ಪುಸ್ತಕವನ್ನು ಓದಿದ ಡಾ. ನೀಲಮ್ಮ ಕತ್ನಳ್ಳಿ ಅವರು "ಈ ಪುಸ್ತಕವನ್ನು ಓದಿದ ನನಗೆ ನಿಜವಾಗಿಯೂ ಭಾಲ್ಕಿ ತಾಲ್ಲೂಕುವನ್ನೆಲ್ಲಾ ಸುತ್ತಾಡಿದಂತಾಯಿತು" ಎಂದು ಬಹಳ ಸಂತೋಷದಿಂದ ಆತ್ಮೀಯತೆಯಿಂದ ಡಾ. ಜಿಬಿ. ವಿಸಾಜಿಯವರಿಗೆ ತಿಳಿಸಿದರು. ಜಿಲ್ಲೆಯ ಅನೇಕ ತಾಲ್ಲೂಕುಗಳ ಪರಿಚಯವೇ ಇಲ್ಲದಿರುವಾಗ ಡಾ. ಜಿ.ಬಿ. ವಿಸಾಜಿಯವರು "ಭಾಲ್ಕಿ ತಾಲ್ಲೂಕು ದರ್ಶನ" ಬರೆದು ಉಳಿದ ಲೇಖಕರಿಗೆ ಒಂದು ಮಾದರಿಯಾಗಿದ್ದಾರೆ.

## ಅಡಿಟಿಪ್ಪಣಿ

೧) ಅನಂತ ಸಂಗಮ ಪು.ಸಂ. ೩೮ / ೧೯೬೯
೨) ಹೊಸಗನ್ನಡ ಸಾಹಿತ್ಯ ಚರಿತ್ರೆ ಪು.ಸಂ. ೧೩೪ / ೧೯೯೯
೩) ಮುಂಜಾವು ಬೆನ್ನುಡಿ ಪು. ಸಂ. / ೧೯೭೫
೪) ಮುಂಜಾವಿನಿಂದ ಮುಸ್ಸಂಜೆಯವರೆಗೆ ಪು.ಸಂ. ೦೩ / ೨೦೦೦
೫) ಮುಂಜಾವಿನಿಂದ ಮುಸ್ಸಂಜೆಯವರೆಗೆ ಪು.ಸಂ. ೨೯ / ೨೦೦೦
೬) ಕನ್ನಡದ ದೀಪ ಪು.ಸಂ. ೧೬೨ / ೨೦೦೬
೭) ಕನ್ನಡದ ದೀಪ ಪು.ಸಂ. ೧೬೮ / ೨೦೦೬
೮) ಕನ್ನಡದ ದೀಪ ಪು.ಸಂ. ೧೭೧ / ೨೦೦೬
೯) ಡಾ.ಜಿ.ಬಿ.ವಿಸಾಜಿ ಬದುಕು ಬರಹ ಪು.ಸಂ. ೧೬ / ೧೯೯೯
೧೦) ಸಾಹಿತ್ಯಾಲೋಕನ ಮುನ್ನುಡಿ / ೧೯೭೫
೧೧) ಡಾ. ಜಿ.ಬಿ.ವಿಸಾಜಿ ಬದುಕು ಬರಹ ಪು.ಸಂ. ೪೧ / ೧೯೯೯
೧೨) ಡಾ. ಜಿ.ಬಿ.ವಿಸಾಜಿ ಬದುಕು ಬರಹ ಪು.ಸಂ. ೩೫ / ೧೯೯೯
೧೩) ಡಾ. ಜಿ.ಬಿ.ವಿಸಾಜಿ ಬದುಕು ಬರಹ ಪು.ಸಂ. ೪೩ / ೧೯೯೯
೧೪) ಡಾ. ಜಿ.ಬಿ.ವಿಸಾಜಿ ಬದುಕು ಬರಹ ಪು.ಸಂ. ೪೩ / ೧೯೯೯
೧೫) ಬೆಳಕಿನೆಡೆಗೆ ಪು.ಸಂ. ೧ / ೨೦೦೨
೧೬) ಬೆಳಕಿನೆಡೆಗೆ ಪು.ಸಂ. ೨ / ೨೦೦೨
೧೭) ಸಾಲುದೀಪ ಪು.ಸಂ. ೧ / ೨೦೦೪
೧೮) ಸಾಹಿತ್ಯದ ಪ್ರಕಾರಗಳು ಪು.ಸಂ. ೧೬೬ / ೧೯೭೩
೧೯) ಶಬ್ದಾಂಜಲಿ ಪು.ಸಂ. ೧೭೮ / ೨೦೦೧
೨೦) ಕೊಳ್ಳೂರು ಹುಸನಾಸಾಹೇಬ ಪು.ಸಂ. ೨೨ / ೧೯೯೮
೨೧) ಉರಿಲಿಂಗ ಪೆದ್ದಿ ಪು.ಸಂ. ೩೫ / ೨೦೦೬
೨೨) ನೆಲದನುಡಿ–೧ ಪು.ಸಂ. ೦೨ / ೧೯೬೬
೨೩) ಚೆಂಬೆಳಕು ಪು.ಸಂ. ೧ / ೧೯೯೪
೨೪) ಕೊಳ್ಳೂರು ಹುಸನಾಸಾಹೇಬ ಪು.ಸಂ. ೧ / ೧೯೯೮
೨೫) ಕೊಳ್ಳೂರು ಹುಸನಾಸಾಹೇಬ ಪು.ಸಂ. ೨ / ೧೯೯೮
೨೬) ಕೊಳ್ಳೂರು ಹುಸನಾಸಾಹೇಬ ಪು.ಸಂ. ೩೧ / ೧೯೯೮
೨೭) ಅಲ್ಲಮ ಪ್ರಭುದೇವರ ವಚನಗಳು ಪು.ಸಂ. ೦೩ / ೧೯೯೮
೨೮) ಅಲ್ಲಮ ಪ್ರಭುದೇವರ ವಚನಗಳು ಪು.ಸಂ. ೦೪ / ೧೯೯೮

# ಅಧ್ಯಾಯ – ೪

## ಡಾ. ಜಿ.ಬಿ. ವಿಸಾಜಿ ಅವರ ಸಾಹಿತ್ಯ ಸತ್ವ

ಬೀದರ ಜಿಲ್ಲೆಯ ಮಣ್ಣಿನಲ್ಲಿ ಹುಟ್ಟಿ ಬರೆಯುತ್ತಿರುವಂತಹ ಡಾ.ಜಿ.ಬಿ. ವಿಸಾಜಿ ಅವರು "ನನಗೆ ಪ್ರಿಯವಾದ ಲೇಖಕರಾಗಿದ್ದಾರೆ". ಎಂದು ಶ್ರೀ ಶಂಕರ ಮೂಗಿ ಅವರು ತಿಳಿಸಿದ್ದಾರೆ. ಈ ಭಾಗದಲ್ಲಿ ಕನ್ನಡವನ್ನು ಕನ್ನಡ ಸಾಹಿತ್ಯವನ್ನು ಹಾಗೂ ಸಾಹಿತಿಗಳನ್ನು ಬೆಳೆಸುತ್ತಾ ಡಾ. ಜಿ.ಬಿ. ವಿಸಾಜಿ ಅವರು ಬೆಳೆದಿದ್ದಾರೆ. ಅವರು ಕಥೆ, ಕವನ, ಪ್ರಬಂಧ, ವಿಮರ್ಶೆ, ಸಂಶೋಧನೆ, ಜೀವನ ಚರಿತ್ರೆ, ಸಂಪಾದನೆ ಇತ್ಯಾದಿ ಸಾಹಿತ್ಯದ ಪ್ರಕಾರಗಳಲ್ಲಿ ಕೈಯಾಡಿಸಿದ್ದಾರೆ. ಈ ಭಾಗದ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವ ಕಾರ್ಯ ಮಾಡಿದ್ದಾರೆ. ಅನೇಕ ಪತ್ರಿಕೆಗಳಲ್ಲಿಯು ಸಾಕಷ್ಟು ಅವರ ಕವನ, ಲೇಖನಗಳು ಪ್ರಕಟವಾಗಿವೆ. ಅವಲ್ಲದೆ ಸಂಘ, ಸಂಸ್ಥೆಗಳಲ್ಲಿಯೂ ಕಾರ್ಯವನ್ನು ಮಾಡಿದ್ದಾರೆ. ಬೀದರ ಜಿಲ್ಲಾ ಆರನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಲ್ಪಟ್ಟಿದ್ದಾರೆ. ಇಲ್ಲಿಯವರೆಗೆ ಅವರ ೨೯ ಪುಸ್ತಕಗಳು ಪ್ರಕಟಗೊಂಡಿವೆ.

ಡಾ. ಜಿ.ಬಿ. ವಿಸಾಜಿ ಅವರು ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ (೧೯೮೦) ದಲ್ಲಿ ಪ್ರಬಂಧ ಮಂಡಿಸಿದ್ದಾರೆ. ಕೊಪ್ಪಳದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ (೧೯೯೩) ಕವಿಗೋಷ್ಠಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಕವಿತಾ ವಾಚನ ಮಾಡಿದ್ದಾರೆ. ಮೈಸೂರು ದಸರಾ ಕವಿಗೋಷ್ಠಿಯಲ್ಲಿ (೨೦೦೦) ದಲ್ಲಿ ಕವನವಾಚನ ಮಾಡಿದ್ದಾರೆ. ಕನ್ನಡ ಸೇವೆಗಾಗಿ ಇವರನ್ನು ಜಿಲ್ಲಾ ಮಟ್ಟದಲ್ಲಿ, ತಾಲ್ಲೂಕ ಮಟ್ಟದಲ್ಲಿ, ವಿಭಾಗ ಮಟ್ಟದಲ್ಲಿಯೂ ಗೌರವಿಸಲಾಗಿದೆ.

ಡಾ. ಜಿ.ಬಿ. ವಿಸಾಜಿ ಅವರು ಬರೆದ "ಶ್ರೀ ಚನ್ನಬಸವ ಪಟ್ಟದ್ದೇವರು ಭಾಲ್ಕಿ" ಕುರಿತು ಡಾ. ಹಾ.ಮಾ. ನಾಯಕ ಅವರು ಒಂದು ಶುದ್ಧ ಸಾರ್ಥಕ ಜೀವನವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟಿದ್ದೀರಿ. ಇಂತಹ ಬದುಕುಗಳು ಸದಾ ದಾರಿದೀಪಗಳು ನಿಮ್ಮ ಕೃತಿ ರಚನೆಯ ಆಶಯ ಸ್ತುತ್ಯಾರ್ಹವಾಗಿದೆ ಎಂದು ತಿಳಿಸಿದ್ದಾರೆ.

ಡಾ. ಜಿ.ಬಿ. ವಿಸಾಜಿ ಅವರ ಚಿಂತನೆಗಳನ್ನು ಮೆಚ್ಚಿ ಅನೇಕ ರೇಡಿಯೋ ಕೇಳುಗರು ಮೆಚ್ಚುಗೆಯನ್ನು ಸೂಚಿಸಿದ್ದಾರೆ. ಇವರಿಂದ ಬೀದರ ಜಿಲ್ಲೆಯಲ್ಲಿಯು ಹುಲುಸಾದ ಸಾಹಿತ್ಯ ಬೆಳೆಯಲು ಸಾಧ್ಯವಾಗಿದೆ. ಡಾ. ಜಿ.ಬಿ.ವಿಸಾಜಿ ಅವರ ಮಂಜಾವಿನಿಂದ ಮುಸ್ಸಂಜೆಯವರೆಗೆ ಕವನ ಸಂಕಲನವನ್ನು ನೋಡಿ ಸಂಯುಕ್ತ ಕರ್ನಾಟಕ ವಾರ್ಷಿಕ ಪುಸ್ತಕಗಳ ಪರಿಶೀಲನೆಯಲ್ಲಿ ಇದೊಂದು ಮಹತ್ವದ ಕವನ ಸಂಕಲನವಾಗಿದೆ ಎಂದು ಡಾ. ಜಿ.ಎಂ. ಹೆಗಡೆ ಅವರು ಅಭಿಪ್ರಾಯಪಟ್ಟಿದ್ದಾರೆ. ಡಾ. ವಿಸಾಜಿ ಅವರು ನಾಡು, ನುಡಿಯ ಉತ್ಕಟ ಪ್ರೇಮಿಗಳಾಗಿದ್ದಾರೆ. ಕುಟುಂಬ

ಪ್ರೇಮಿಗಳಾಗಿದ್ದಾರೆ. ತಮ್ಮ ಕವಿತೆಗಳನ್ನು ವ್ಯಕ್ತಿಚಿತ್ರಗಳನ್ನು ಕಣ್ಮುಂದೆ ಕಾಣುವಂತೆ ಚಿತ್ರಿಸಬಲ್ಲರು. ವಿಸಾಜಿ ಅವರ ದಾಂಪತ್ಯ ಗೀತೆಗಳು ಸೊಗಸಾಗಿವೆ. ಇವರ ಕವನ ಸಂಕಲನದಲ್ಲಿ ಸಾಂದರ್ಭಿಕ ವಸ್ತುಗಳು ಕವನ ರೂಪವನ್ನು ಪಡೆದಿವೆ. ಏಡ್ಸ ಮಹಾಮಾರಕವಾದ ರೋಗದ ಪರಿಣಾಮವನ್ನು ಕುರಿತು ವಿವರಿಸುವ ಪದ್ಯ, 'ಕುಡುಕ' ಮದ್ಯಪಾನದಿಂದ ಕೆಟ್ಟ ಪರಿಣಾಮವನ್ನು ಚಿತ್ರಿಸುವ ಪದ್ಯ, ಚೀನಾ ಆಕ್ರಮಣದ ಸನ್ನಿವೇಶವನ್ನು ಜವಾಹರರಾಹ್ವಾನ ದಲ್ಲಿ ಮೂಡಿಬಂದಿದೆ. ಸ್ವಾತಂತ್ರ್ಯದ ಹೆಸರಿನಲ್ಲಿ ಈ ಕವನದಲ್ಲಿ ಬಡವರು ಹಾಗೂ ನಿರಕ್ಷರಿಗಳ ಮೇಲೆ ನಿರಂತರವಾಗಿ ನಡೆದಿರುವ ಶೋಷಣೆಯ ಸ್ವರೂಪವನ್ನು ಚಿತ್ರಿಸಲಾಗಿದೆ. "ಯುವಶಕ್ತಿ" ಯುವಕರ ಬಗ್ಗೆ ಆತ್ಮ ವಿಶ್ವಾಸವನ್ನು ಮೂಡಿಸುವ ಕವನವಾಗಿದೆ. ಈ ಸಂಕಲನದಲ್ಲಿ ಹಸ್ತಾಕ್ಷರ ಒಂದು ಸಾರ್ಥಕ ಕವನವಾಗಿದೆ. ಮಳೆ ಭೂಮಿಯ ಮೇಲೆ ಬೀಳುವ ಕ್ರಿಯೆಯನ್ನು ಕವಿ ಹಸ್ತಾಕ್ಷರಕ್ಕೆ ಹೋಲಿಸಿದ್ದು ಹೃದ್ಯವಾಗಿದೆ. ಬದುಕನ್ನು ಮೂರು ಹಂತಗಳಲ್ಲಿ ಬಾಲ್ಯ ಯೌವ್ವನ ವೃದ್ಧಾಪ್ಯಗಳನ್ನು ಆಕಳ ಕರು, ಹೋರಿ, ಹಾಗೂ ಎತ್ತುಗಳ ಚಿತ್ರಗಳ ಮೂಲಕ ತುಂಬ ಔಚಿತ್ಯಪೂರ್ಣವಾಗಿ ಬದುಕು ಕವನದಲ್ಲಿ ಚಿತ್ರಿಸಿದ್ದಾರೆ. ಇತ್ತೀಚಿನ ಕವಿತೆಗಳಲ್ಲಿ ಡಾ. ಜಿ.ಬಿ. ವಿಸಾಜಿ ಅವರು ಗಂಭೀರ ಚಿಂತನೆಗೆ ತೊಡಗಿದ್ದಾರೆ. ದೇಶದ ಹಿತಚಿಂತನೆಯು ಅವರಿಗೆ ಮುಖ್ಯವಾದ ವಸ್ತುವಾಗಿದೆ. ಇದರಿಂದ ಓದುಗರನ್ನು ನೇರವಾಗಿ ಚಿಂತನೆಗೆ ತೊಡಗಿಸುತ್ತಾರೆ. ಡಾ. ಜಿ.ಬಿ. ವಿಸಾಜಿ ಅವರು ವ್ಯಕ್ತಿ ಚಿತ್ರಗಳು ಅನೇಕ ಜನರ ಮನಸ್ಸನ್ನು ಆಕರ್ಷಿಸಿವೆ. ಸಮಾಜಕ್ಕಾಗಿ ದುಡಿದ ಸಮಾಜವನ್ನು ಕಟ್ಟುವಲ್ಲಿ ಸಂಸ್ಕೃತಿಯನ್ನು ಬೆಳೆಸುವಲ್ಲಿ ನಾಡು ನುಡಿಗಾಗಿ ಶ್ರಮಿಸಿದ ಮಹಾನುಭಾವರ ಜೀವನ ಚರಿತ್ರೆಗಳನ್ನು ಬರೆದು ವಿಸಾಜಿ ಅವರು ಸಮಾಜಕ್ಕೆ ಉಪಕಾರ ಮಾಡಿದದ್ದಾರೆ. ಉದಗೀರ ಸಂಗ್ರಾಮಪ್ಪನವರು ಭಾರತ ಸ್ವಾಂತಂತ್ರ್ಯದ ಪೂರ್ವದಲ್ಲಿ ಈ ಭಾಗದ ಜನರ ಅಭಿವೃದ್ಧಿಗಾಗಿ ದುಡಿದದ್ದು, ಅನ್ಯಾಯದ ವಿರುದ್ಧ ಪ್ರತಿಭಟಿಸಿದ್ದು ತಮ್ಮ ಘನ ವಿದ್ವತ್ತನ್ನು ಮೆರೆದು ದಿನ ದಲಿತರು ರೋಗಿಗಳ ಬಗ್ಗೆ ಅವರು ತೋರಿಸಿದ ಅನುಕಂಪ ಗಮನಾರ್ಹವಾಗಿದೆ. ಚನ್ನಬಸವ ಪಟ್ಟದ್ದೇವರ ಕುರಿತು ಅವರು ಬರೆದಿರುವ ವ್ಯಕ್ತಿ ಚಿತ್ರ ಅತ್ಯಂತ ಮಹತ್ವದ್ದಾಗಿದೆ. ಅವರ ಉನ್ನತ ವ್ಯಕ್ತಿತ್ವ, ಕನ್ನಡ ಉಳಿಸಲು ಬೆಳೆಸಲು ಅವರು ಪಟ್ಟ ಪಾಡು, ಗ್ರಾಮೀಣ ಮಕ್ಕಳಿಗೆ ಶಿಕ್ಷಣವನ್ನು ನೀಡಲು ಶ್ರಮಿಸಿದ ಬಗೆ, ಸಮಾಜದಲ್ಲಿಯ ಮೌಢ್ಯತೆ, ಅಂಧಾನುಕರಣೆ ರೂಢಿಗಳನ್ನು ನಿವಾರಿಸಲು ಅವರು ತೋರಿಸಿದ ಕಳಕಳಿ ಇವೆಲ್ಲವು ಈ ಭಾಗದ ಜನತೆಗೆ ಅವರು ನೀಡಿದ ಬೆಳಕು. ಜೀವನದಲ್ಲಿ ತಂದು ಕೊಟ್ಟ ಶಾಂತಿ, ಸೌಹಾರ್ದತೆ, ಸಮೃದ್ಧಿ ಇವುಗಲೆಲ್ಲ ನೆನಪಿಸುವಂತಹವುಗಳಾಗಿವೆ.

ರಾಯಕಾಶಿರಾಯ ದೇಶಮುಖರು ಸ್ವಾತಂತ್ರ್ಯ ಪೂರ್ವದಲ್ಲಿಯೇ ಈ ಭಾಗದ ಜನರ ಕಷ್ಟಗಳನ್ನು ಪರಿಹರಿಸಲು ಪ್ರಯತ್ನಿಸಿದವರು. ತಮ್ಮ ಅಧಿನದಲ್ಲಿರುವ ಕೃಷಿ ಭೂಮಿಯನ್ನೆಲ್ಲ ಉಚಿತವಾಗಿ ಜನತೆಗೆ ಹಂಚಿದವರು. ತಮ್ಮ ಸ್ವಂತ ವೆಚ್ಚದಲ್ಲಿ ಶಿಕ್ಷಣ, ಸಂಗೀತ ಶಿಕ್ಷಣ, ಪ್ರಾರಂಭಿಸಿದವರು, ಪರೋಕ್ಷವಾಗಿ ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಡುವವರಿಗೆ, ಹೈದ್ರಾಬಾದ ಕರ್ನಾಟಕ ಪ್ರದೇಶದ ವಿಮೋಚನೆಗಾಗಿ ಹೋರಾಡುವವರಿಗೆ ಬೆನ್ನೆಲುಬಾಗಿ ನಿಂತು ಸಹಾಯ ಮಾಡಿದವರು. ಇಂತಹ ಪುಣ್ಯಪುರುಷರ ಜೀವನ ಚರಿತ್ರೆಯನ್ನು ಕಟ್ಟಿಕೊಟ್ಟು ಡಾ. ಜಿ.ಬಿ. ವಿಸಾಜಿ ಅವರು ಉತ್ತಮ ಕಾರ್ಯವನ್ನು ಮಾಡಿದ್ದಾರೆ.

ಶ್ರೀ ಕೇಶವರಾವ ನಿಟ್ಟೂರಕರ ಅವರನ್ನು ಕುರಿತು ಅತ್ಯಂತ ಶ್ರಮವಹಿಸಿ ಗ್ರಂಥರಚಿಸಿದ್ದಾರೆ. ಇದು ಬೀದರ ಜಿಲ್ಲೆಯಲ್ಲಿಯೇ ಪ್ರಪ್ರಥಮವಾದುದ್ದಾಗಿದೆ. ಈ ಗ್ರಂಥವನ್ನು ಓದಿದಾಗ ಆಗಿನ ಕಾಲದ ಬೀದರ ಜಿಲ್ಲೆಯ ಪರಿಸ್ಥಿತಿ ನಡೆದ ಸುಧಾರಣೆಗಳು ವ್ಯಕ್ತವಾಗುತ್ತದೆ. ಶ್ರೀ ಕೇಶವರಾವ ನಿಟ್ಟೂರಕರ ವಿಧಾನ ಪರಿಷತ್ತ್ ಸದಸ್ಯರಾಗಿ ಕೈಗೊಂಡ ಕಾರ್ಯಗಳು, ವಿಧಾನ ಪರಿಷತ್ತ್‌ನಲ್ಲಿ ಅವರು ಮಾಡಿದ ಭಾಷಣಗಳು ಅವರ ಘನತೆಗೆ ತಕ್ಕುವುದ್ದಾಗಿವೆ. ಈ ಪುಸ್ತಕ ಮುಂಬರುವ ರಾಜಕೀಯ ಧುರಣರಿಗೆ ಪೀಳಿಗೆಗೆ ಮಾದರಿಯಾಗಿದೆ, ಮಾರ್ಗದರ್ಶನವಾಗಿದೆ.

ಡಾ. ಜಿ.ಬಿ.ವಿಸಾಜಿ ಅವರು ಐ.ಬಿ.ಎಚ್. ಪ್ರಕಾಶನದಿಂದ ಪ್ರಕಟಿಸಿದ "ಭಾಲ್ಕಿ ತಾಲ್ಲೂಕ ದರ್ಶನ" ಬೀದರ ಜಿಲ್ಲೆಗೆ ನೀಡಿದ ಮತ್ತೊಂದು ಅಪೂರ್ವ ಕೊಡುಗೆಯಾಗಿದೆ. ಇದರಲ್ಲಿ ಆಗಿನ ಕಾಲದ ಅಪರೂಪದ ಚಿತ್ರಗಳಿವೆ ಈ ಪುಸ್ತಕ ಓದಿದಾಗ ನಿಜವಾಗಿಯು ನಾವು ಈ ತಾಲ್ಲೂಕಿನಲ್ಲಿ ಸುತ್ತಾಡಿ ಬಂದ ಅನುಭವವಾಗುತ್ತದೆ ಬೀದರ ಜಿಲ್ಲೆಯನ್ನು ಪರಿಚಯಿಸುವಲ್ಲಿ ಈ ಪುಸ್ತಕವು ಯಶಸ್ವಿಯಾಗಿದೆ.

ಡಾ. ಜಿ.ಬಿ.ವಿಸಾಜಿ ಅವರು ಬರೆದ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪ್ರಕಟವಾದ "ಕೊಳ್ಳೂರು ಹುಸನಾಸಾಹೇಬ" (ಗದ್ಯ) ಮತ್ತು ಕನ್ನಡ ಸಾಹಿತ್ಯ ಅಕಾಡೆಮಿ ಅವರು ಪ್ರಕಟಿಸಿದ "ಕೊಳ್ಳೂರು ಹುಸನಾಸಾಹೇಬ" (ಪದ್ಯ) ಈ ಪುಸ್ತಕಗಳು ಅತ್ಯಂತ ಮಹತ್ವ ಪೂರ್ಣವಾಗಿವೆ. ಇದರಿಂದ ಒಬ್ಬ ಪ್ರಮುಖ ಜನಪದ ಕವಿ ಇಡೀ ನಾಡಿನ ತುಂಬ ಪ್ರಸಿದ್ಧಿಗೆ ಬರಲು ಕಾರಣವಾಯಿತು. ಯಾವ ಕಾಲದಲ್ಲಿ ಈ ಭಾಗದಲ್ಲಿ ಕನ್ನಡ ಸಾಹಿತ್ಯಕ್ಕೆ ಬರಗಾಲವಿತ್ತು ಅಂತಹ ಸಮಯದಲ್ಲಿ ಒಬ್ಬ ಮುಸ್ಲಿಂ ಕವಿ ಕನ್ನಡದಲ್ಲಿ ಕವಿತೆಗಳನ್ನು ಕಟ್ಟಿ ಹಾಡಿ ಆ ಕೊರತೆಯನ್ನು ತುಂಬಿ ಕೊಟ್ಟಿದ್ದಾನೆ. ಆ ಕವಿಯ ಕನ್ನಡ ಭಾಷಾ ಪ್ರೇಮ ಶರಣರ ಬಗೆಗಿನ ಪ್ರೀತಿ ಆ ಕಾಲದಲ್ಲಿ ನಡೆದ ಸನ್ನಿವೇಶಗಳ ಸಾಂದರ್ಭಿಕ ವಾಸ್ತವಿಕ ಚಿತ್ರಣ ಶಾಶ್ವತವಾಗಿ ಆತನ ಕವನಗಳಿಂದ ಉಳಿದುಬಂದಿದೆ. ಕೊಳ್ಳೂರು ಹುಸನಾಸಾಹೇಬರು ನಾಟಕಗಳನ್ನು ಬರೆದಿದ್ದಾರೆ. ಗೀಗಿ ಪದಗಳನ್ನು ರಚಿಸಿದ್ದಾರೆ. ಮೊಹರಂ ಪದಗಳನ್ನು ರಚಿಸಿದ್ದಾರೆ. ನಾಟಕಗಳನ್ನು ಬರೆದಿದ್ದಾರೆ. ನಾಟಕಗಳಲ್ಲಿ ಹಾಡುಗಳನ್ನು ರಚಿಸಿಕೊಟ್ಟಿದ್ದಾರೆ. ಅವರ ಅನೇಕ ಸಾಹಿತ್ಯ ಕೈಗೆ ಸಿಗದೆ ಬಹಳಷ್ಟು ನಾಶವಾಗಿದೆ. ಈಗ ಡಾ. ಜಿ.ಬಿ. ವಿಸಾಜಿ ಅವರು ಸಂಗ್ರಹಿಸಿದ್ದು ಅಲ್ಪವಾದರು ಅಷ್ಟಾದರು ಜನತೆಗೆ ಉಳಿಸಿಕೊಟ್ಟದ್ದು ಮಹತ್ವದ್ದಾಗಿದೆ. ಕೊಳ್ಳೂರು ಹುಸನಾಸಾಹೇಬರು ತಬಲಾ ವಾದಕರಾಗಿದ್ದರು. ಹಾರ್ಮೋನಿಯಂ ವಾದಕರಾಗಿದ್ದರು. ಅವರು ನಾಟಕದಲ್ಲಿ ಅತ್ಯುತ್ತಮ ಅಭಿನಯವನ್ನು ನೀಡಿದ್ದಾರೆ. ಭದ್ರಪ್ಪ ಗುರುಗಳ ಉತ್ತಮ ಶಿಷ್ಯರಾಗಿದ್ದರು. ಆ ಭಾಗದ ಜನಪ್ರಿಯ ವ್ಯಕ್ತಿಗಳಾಗಿದ್ದರು ಅವರ ಕವನಗಳು ಇಂದಿಗು ಈ ಭಾಗದಲ್ಲಿ ಪ್ರಚಲಿತವಾಗಿವೆ. ಇವರು ತಮ್ಮ ಗಾಯನದಿಂದ ಕೋಮು ಸಾಮರಸ್ಯವನ್ನು ಬೆಳೆಸಲು ಶ್ರಮಿಸಿದ್ದಾರೆ. ಗುಲಬರ್ಗಾದಿಂದ ಕಲ್ಯಾಣದವರೆಗೆ ಅವರ ಪ್ರಸಿದ್ಧಿ ಜನಜನಿತವಾಗಿದೆ. ಅವರ ಹಾಡನ್ನು ಕೇಳಲು ಅವರನ್ನು ನೋಡಲು ಜನ ಮುಗಿ ಬೀಳುತ್ತಿದ್ದರು. ಅವರ ಗಾಯನ ಕಲೆಯನ್ನು ಅವರ ಮಕ್ಕಳಾದ ನುಷಾರ ಸಾಹೇಬ ಹಾಗೂ ಗುಲಾಬ ಸಾಹೇಬ

ಅವರು ಮುಂದುವರೆಸಿಕೊಂಡು ಬಂದಿದ್ದಾರೆ. ಅವರು ಕನ್ನಡ ಭಾಷೆಯ ಹಾಡುಗಳನ್ನು ಮೋಡಿ ಲಿಪಿಯನ್ನು ಬರೆದಿಟ್ಟಿದ್ದಾರೆ. ತಮ್ಮ ಜೀವನೋಪಯೋಗಕ್ಕಾಗಿ ಬಟ್ಟೆ ಹೊಲೆಯುವ ಕಾಯಕ ಮಾಡುತ್ತಿದ್ದರು. ಅವರು ಪಿಂಜಾರ ಮನೆತನದವರು. ಅವರ ತಂದೆ ಕುದುರೆ ಮೇಲೆ ಹಾಕುವ ಕೋಗಿರ (ಥಡಿ) ತಯ್ಯಾರಿಸುತ್ತಿದ್ದರು. ಸಾಧು–ಸಂತರೊಡನೆ ಸತ್ಸಂಗ ಮಾಡುತ್ತಿದ್ದರು. ಜಾತ್ರೆ, ಖಾಂಡುಗಳಲ್ಲಿ ಭಜನಾ ಮೇಳದೊಂದಿಗೆ ಭಾಗವಹಿಸುತ್ತಿದ್ದರು ಪ್ರಸಿದ್ಧ ಆಶಾ ಕವಿಗಳಾದ್ದರು. ಹುಸನಾ ಸಾಹೇಬರನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಡಾ. ಜಿ.ಬಿ. ವಿಸಾಜಿ ಅವರು ಪ್ರಪ್ರಥಮವಾಗಿ ಪರಿಚಯಿಸಿದ್ದಾರೆ. ಒಬ್ಬ ಜಾನಪದ ಕವಿಯನ್ನು ಉಳಿಸಿಕೊಟ್ಟ ಕೀರ್ತಿ ಡಾ. ಜಿ.ಬಿ. ವಿಸಾಜಿ ಅವರಿಗೆ ಸಲ್ಲುತ್ತದೆ.

ಡಾ. ಎಂ.ಎಂ. ಕಲಬುರ್ಗಿ ಅವರು ಡಾ. ಜಿ.ಬಿ.ವಿಸಾಜಿ ಅವರ ಗುರುಗಳು ಅವರು ಸ್ನಾತಕೋತ್ತರ ಪದವಿಗಾಗಿ ಅಭ್ಯಾಸ ಮಾಡುತ್ತಿರುವಾಗ ಕನ್ನಡದ ದಿಗ್ಗಜರು ಪಾಠವನ್ನು ಹೇಳಿಕೊಡುತ್ತಿದ್ದರು. ಡಾ. ಆರ್.ಸಿ. ಹಿರೇಮಠ, ಡಾ. ಎಂ.ಎಸ್. ಸುಂಕಾಪುರ, ಸಂ.ಶಿ. ಭೂಸನೂರ ಮಠ, ವ್ಹಿ.ಜಿ.ಕುಲಕರ್ಣಿ, ವೃಷಬೇಂದ್ರ ಸ್ವಾಮಿ, ಬಿ.ಎಸ್. ಕುಲಕರ್ಣಿ, ಡಾ. ಜಿ.ಎಸ್. ಕೊಳ್ಳಿ ಮುಂತಾದ ಘನ ವಿದ್ವಾಂಸರು ಬೋಧಕರಾಗಿದ್ದರು. ಶಂಭಾ ಜೋಷಿ, ದ.ರಾ. ಬೇಂದ್ರೆ, ಚೆನ್ನವೀರ ಕಣವಿ ಬಸವರಾಜ ಕಟ್ಟಿಮನಿ, ಬೆಟಗೇರಿ ಕೃಷ್ಣ ಶರ್ಮ ಮುಂತಾದವರು ಕನ್ನಡ ಕಾರ್ಯಕ್ರಮಗಳಲ್ಲಿ ಕಾಣಲು ಸಿಗುತ್ತಿದ್ದರು. ತಪೋವನದ ಕುಮಾರ ಸ್ವಾಮಿಗಳು ತಮ್ಮ ವಿದ್ವತಪೂರ್ಣ ಭಾಷಣದಿಂದ ಪ್ರಸಿದ್ಧವಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಡಾ. ಡಿ.ಎಲ್. ನಂಜುಂಡಪ್ಪ ಅವರು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಿಚಾರ ಸಂಕಿರಣಗಳು ಏರ್ಪಡಿಸುತ್ತಿದ್ದರು. ರಾಜ್ಯ ಶಾಸ್ತ್ರದ ವಿಭಾಗದಲ್ಲಿ ಪ್ರೊ. ಜಿ.ಎಸ್. ಹಾಲಪ್ಪ ಅವರು ಪ್ರತಿಭಾವಂತ ಪ್ರಾಧ್ಯಾಪಕರಾಗಿ ಕರ್ನಾಟಕ ಸರ್ಕಾರಕ್ಕೆ ಸಲಹೆಗಾರರಾಗಿದ್ದರು. ಖ್ಯಾತ ಗಾಯಕ ಮಲ್ಲಿಕಾರ್ಜುನ ಮನಸೂರ, ಪಂಡಿತ ಬಸವರಾಜ ರಾಜಗುರು ಅವರ "ಸಂಗೀತ ಸುಧೆ" ಕೇಳಲು ಸಿಗುತಿತ್ತು. ಆಗ ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜ, ಸಿದ್ಧಲಿಂಗ ಪಟ್ಟಣ ಶೆಟ್ಟಿ, ಮುದ್ದಣ್ಣ ಹಿಂಗಮಿರೆ, ಭರದಿಂದ ಬೆಳೆಯುತ್ತಿದ್ದರು, ಡಾ. ಡಿ.ಎಸ್. ಕರ್ಕಿ, ಡಾ. ರಂ.ಶ್ರೀ ಮುಗಳಿ, ಡಾ. ರಾಯ ಧಾರವಾಡಕರ, ಶ್ರೀ ರಂಗ, ಪಾಟೀಲ ಪುಟ್ಟಪ್ಪ, ಈಶ್ವರ ಸಣಕಲ್ಲ, ಸಿದ್ದಯ್ಯ ಪುರಾಣಿಕ, ಎನ್.ಕೆ. ಕುಲಕರ್ಣಿ ಇತ್ಯಾದಿ ಲೇಖಕರನ್ನು ನೋಡುವ ಭಾಗ್ಯ ದೊರಕುತ್ತಿತ್ತು. ಇದರ ಪ್ರಭಾವ ಪರಿಣಾಮ ಡಾ. ಜಿ.ಬಿ. ವಿಸಾಜಿ ಅವರ ಮೇಲೆ ಆಗಿದೆ.

ಡಾ. ಜಿ.ಬಿ. ವಿಸಾಜಿ ಅವರು ಬಿ.ಎ. ತೃತೀಯ ಐಚ್ಛಿಕ ಕನ್ನಡ ವಿದ್ಯಾರ್ಥಿಗಳಿಗಾಗಿ ಹರಿಹರದೇವನ ನಾಲ್ಕು ರಗಳೆಗಳು ಪುಸ್ತಕ ಸಂಪಾದಿಸಿಕೊಟ್ಟಿದ್ದಾರೆ. ವಿದ್ಯಾರ್ಥಿಗಳಿಗೆ ಸರ್ವರೀತಿಯಲ್ಲಿ ಸಹಾಯವಾಗುವಂತೆ ಪ್ರಸ್ತಾವನೆ ಬರೆದುಕೊಟ್ಟಿದ್ದಾರೆ ರಗಳೆಯಲ್ಲಿ ಬರುವ ಕಠಿಣ ಶಬ್ದಗಳಿಗೆ ಅರ್ಥಗಳನ್ನು ಪೂರೈಸಿದ್ದಾರೆ. ರಗಳೆಗಳನ್ನು ಸಂಪಾದಿಸುವಲ್ಲಿ ನಾಲ್ಕಾರು ಪ್ರತಿಗಳನ್ನು ಇಟ್ಟುಕೊಂಡು ಸುದ್ಧ ಪಾಠ ತಯ್ಯಾರಿಸಲು ಪ್ರಯತ್ನಿಸಿದ್ದಾರೆ. ಇದು ವಿದ್ಯಾರ್ಥಿಗಳಿಗೆ ಒಂದು ಅಚ್ಚುಮೆಚ್ಚಿನ ಪಠ್ಯವಾಗಿದೆ.

ಡಾ. ಜಿ.ಬಿ. ವಿಸಾಜಿ ಅವರು ಹಿರೇಮಠ ಸಂಸ್ಥಾನದಿಂದ ಪ್ರಕಟವಾಗುತ್ತಿರುವ "ಶಾಂತಿಕಿರಣ" ಪತ್ರಿಕೆಯಲ್ಲಿ ಬಹಳ ಮಹತ್ವಪೂರ್ಣ ಲೇಖನವನ್ನು ಪ್ರಕಟಿಸಿದ್ದಾರೆ. ಈ ಲೇಖನಗಳನ್ನು ಸಂಗ್ರಹಿಸಿ ಗ್ರಂಥ ರೂಪದಲ್ಲಿ ಪ್ರಕಟಿಸಿದರೆ ಓದುಗರಿಗೆ ದೊಡ್ಡ ಉಪಕಾರವಾಗುತ್ತದೆ. ಡಾ. ಜಿ.ಬಿ. ವಿಸಾಜಿ ಅವರು ಪ್ರಜಾವಾಣಿ, ಡೆಕ್ಕನ ಹೆರಾಲ್ಡ, ರಾಜೋಳೆ ಸಂಘರ್ಷ ಪತ್ರಿಕೆಗಳಲ್ಲಿ ಕಾರ್ಯಮಾಡಿದ್ದಾರೆ.

ಒಟ್ಟಿನಲಿ ಡಾ. ಜಿ.ಬಿ. ವಿಸಾಜಿ ಅವರು ಬೀದರ ಜಿಲ್ಲೆಯ ಕನ್ನಡ ಬೆಳ್ಳಿ ಚುಕ್ಕಿಯಾಗಿದ್ದಾರೆ. ಇಲ್ಲಿಯ ಕನ್ನಡದ ಬೆಳವಣಿಗೆಗೆ ಅವರು ಮುಂಜಾವಿನಂತೆ ಬೆಳಕನ್ನು ಹರಡಿಸಿದವರಾಗಿದ್ದಾರೆ. ತಾವು ಬೆಳೆಯುವದರೊಂದಿಗೆ ಅನೇಕ ಸಾಹಿತಿಗಳನ್ನು ಬೆಳೆಯಿಸಿದ್ದಾರೆ. ಅವರು ನಿರಂತರ ಅಧ್ಯಯನ ಅಧ್ಯಾಪನ ಮತ್ತು ಕನ್ನಡಪರ ಚಟುವಟಿಕೆಗಳಲ್ಲಿ ತೊಡಗಿದವರಾಗಿದ್ದಾರೆ.

## ಅಧ್ಯಾಯ – ೫

## ಡಾ. ಜಿ.ಬಿ. ವಿಸಾಜಿ ಅವರ ಬಗ್ಗೆ ಕೆಲವು ಸಾಹಿತಿಗಳ ಅಭಿಪ್ರಾಯಗಳು

ಡಾ. ಜಿ.ಬಿ. ವಿಸಾಜಿ ಅವರು ಕಥೆ, ಕವನ, ವ್ಯಕ್ತಿಚಿತ್ರ, ಪ್ರಬಂಧ, ಸಂಪಾದನೆ, ಪತ್ರಿಕೋದ್ಯಮ, ಕ್ಷೇತ್ರಗಳಲ್ಲಿ ಕಾರ್ಯ ಮಾಡಿದ್ದಾರೆ. ಇವರ ೨೬ ಪುಸ್ತಕಗಳು ಪ್ರಕಟವಾಗಿವೆ. ಇವರಿಗೆ ಬೀದರ ಜಿಲ್ಲಾ ಆರನೆ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನಿತ್ತು ಗೌರವಿಸಲಾಗಿದೆ. ಇವರನ್ನು ಕುರಿತು ಅನೇಕ ಹಿರಿಯ ಸಾಹಿತಿಗಳು, ಗಣ್ಯರು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವುಗಳಲ್ಲಿ ಕೆಲವು ಪ್ರಮುಖ ಸಾಹಿತಿಗಳ ಅಭಿಪ್ರಾಯಗಳು ಹೀಗಿವೆ.

ಬೀದರ ಜಿಲ್ಲೆಯ ಕೋಹಿನೂರ ಗೆಳೆಯರ ಬಳಗದವರು ನಡೆಸುತ್ತಿರುವ ಸುಸಂಘಟಿತ ಚಟುವಟಿಕೆಗಳಲ್ಲಿ ಸಾಹಿತ್ಯ ರಂಗವೂ ಒಂದಾಗಿದೆ. "ನೆಲದನುಡಿ" ಯ ಮೂಲಕ ಆ ಭಾಗದ ಲೇಖಕರ ಕಲಾಭಿವ್ಯಕ್ತಿಗೆ ಅವಕಾಶವನ್ನು ಒದಗಿಸಿಕೊಡುವಲ್ಲಿ ಗೆಳೆಯರ ಬಳಗ ಒಂದು ಉತ್ತಮ ಕಾರ್ಯವನ್ನು ಹಮ್ಮಿಕೊಂಡಿದೆ. ಮೊದಲ ಎರಡು ಸಂಚಿಕೆಗಳಲ್ಲಿ ಪ್ರಕಟವಾಗಿರುವ ಕವಿತೆ, ಲೇಖನಗಳು, ಆಶಾದಾಯಕವಾಗಿವೆ. ಅವರ ಈ ಸಾಹಸ ಸತ್ವಪೂರ್ಣವಾದ ಸಿದ್ಧಿಯನ್ನು ಪಡೆಯಲಿ ಎಂದು ಹಾರೈಸುತ್ತೇನೆ.

ಚನ್ನವೀರ ಕಣವಿ
ಶ್ರೇಷ್ಠ ಕವಿಗಳು, ಧಾರವಾಡ
ದೃಷ್ಟಿ ಕನ್ನಡ ದಿನ ಪತ್ರಿಕೆ/ ಪು.ಸಂ.೦೩/ ದಿ. ೧೧/೦೪/೨೦೦೮

ಚಿಂತನ ಸಂಕಲನಗಳು ಪ್ರಕಟವಾದಾಗಲೆಲ್ಲ ನನಗೆ ಹೆಚ್ಚಿನ ಸಂತೋಷವಾಗುತ್ತದೆ. ಇದು ಕಿರು ಪ್ರಬಂಧಗಳ ಪ್ರಕಾರ ನಮ್ಮಲ್ಲಿ ತೀರಹೊಸತು. ಬದುಕಿಗೆ ಅಗತ್ಯವಾದ ಕೆಲವು ಮೌಲ್ಯಗಳನ್ನು ನೀವು ಸಮರ್ಥವಾಗಿ ಪ್ರತಿಪಾದಿಸಿದ್ದೀರಿ. ಈ ಪ್ರಬಂಧಗಳಲ್ಲಿ ನಿಮ್ಮ ಅನುಭವ ಅಧ್ಯಯನಗಳು ನಿಚ್ಚಳವಾಗಿ ಕಾಣಿಸಿಕೊಂಡಿವೆ.

ಡಾ. ಹಾಮಾ. ನಾಯಕ
ಮೈಸೂರು
ಸಾಲುದೀಪ – ಕಿರುಪ್ರಬಂಧ ಬೆನ್ನುಡಿ/ ೨೦೦೪

ಡಾ. ಜಿ.ಬಿ. ವಿಸಾಜಿ ಅವರ ಜೀವನವೇ ಅಧ್ಯಯನ ಮತ್ತು ಅಧ್ಯಾಪನವಾಗಿದೆ. ನಿರಂತರ ವಿದ್ಯಾರ್ಥಿಗಳ ಸಮಸ್ಯೆಗಳನ್ನು ತಿಳಿದುಕೊಳ್ಳುವುದು. ಅವುಗಳಿಗೆ ಸಮಾಧಾನ ನೀಡುವುದು. ಅವರ ಸುಪ್ತ ಪ್ರತಿಭೆಗಳಿಗೆ ಪ್ರೇರಣೆ ನೀಡುವುದೇ ಅವರ ಜೀವನದ ಗುರಿಯಾಗಿದೆ. ಅಧ್ಯಯನದ ಸಂಬಂಧವೇ ಅವರ ಜೀವನದ ಸಾರ್ಥಕತೆಯಾಗಿದೆ.

ಪ್ರೊ. ಬಿ.ಜಿ. ಘೋಡಕೆ
ನಾಂದೇಡ
ಡಾ. ಜಿ.ಬಿ. ವಿಸಾಜಿ ಬದುಕು–ಬರಹ ಪು.ಸಂ. ೮೨/ ೧೯೯೯

ಡಾ. ಜಿ.ಬಿ. ವಿಸಾಜಿಯವರ "ಸಾಲುದೀಪ" ಕಿರು ಪ್ರಬಂಧಗಳು ಮಕ್ಕಳಿಗೆ ಸಾಮಾನ್ಯರಿಗೆ ಸಾಕಷ್ಟು ವಿಷಯ ವಿವರ ನೀಡುವುದರ ಜೊತೆಗೆ ವಿಚಾರಕ್ಕೆ ಪ್ರೇರಣೆಯನ್ನೂ ಪೂರೈಸುತ್ತದೆ. ವಿಷಯ ವೈವಿಧ್ಯತೆಯ ಅರಿವು ಮೂಡಿಸುವಲ್ಲಿ ಈ ಕೃತಿ ಸಾರ್ಥಕತೆ ಪಡೆದಿದೆ ಸಮಕಾಲೀನತೆ ಪ್ರಚಲಿತತೆ ಇವುಗಳ ವೈಶಿಷ್ಟ್ಯವಾಗಿದೆ.

ಎಳೆಯರಿಗೆ ಬಹಳ ಪ್ರಯೋಜನವಾಗಬಹುದಾದ ಸಂಕಲನ ಹೊರತಂದು ಔಚಿತ್ಯ ಪೂರ್ಣ ಕೆಲಸ ಮಾಡಿದ್ದೀರಿ. ಈ ಸಾಲುದೀಪಗಳ ಬೆಳಕಿನಲ್ಲಿ ಹೊಸಚಿಂತನೆಗೆ ಅವಕಾಶ ಅವಶ್ಯಕ ದೊರಕುತ್ತದೆ. ಅಮೇರಿಕಾದ ಅರಿವು, ವ್ಯಾಯಾಮದ ಲಾಭಗಳು, ಮಾದಕ ವಸ್ತುಗಳ ದುಷ್ಪರಿಣಾಮ ಮೊದಲಾದವು ಪರಿಣಾಮಕಾರಿ ಪ್ರಯೋಜನಕಾರಿ ಪ್ರಬಂಧಗಳಾಗಿವೆ.

ಡಾ. ಮ.ಗು. ಬಿರಾದಾರ
ಗುಲಬರ್ಗಾ
ದೃಷ್ಟಿ ಕನ್ನಡ ದಿನ ಪತ್ರಿಕೆ/ ಪು.ಸಂ. ೦೩/ ದಿ. ೨೮/೦೨/೨೦೦೮

ನಿಮ್ಮ ವೈಚಾರಿಕ ಮಟ್ಟ ಅಧ್ಯಯನದ ಆಳ, ಇಲ್ಲಿ ಗುರುತಿಸಬಹುದಾಗಿದೆ ವಿಷಯ ಪ್ರತಿಪಾದನೆಯಲ್ಲಿ ನೀವು ಅನುಸರಿಸುವ ಸರಳ, ನೇರಮಾರ್ಗ ಎಂಥಹ ಓದುಗರಿಗೂ ಎಲ್ಲ ಮಟ್ಟದ ಆಸಕ್ತರಿಗೂ ಸುಲಭ ಗ್ರಾಹ್ಯವಾದದ್ದಾಗಿದೆ.

ಡಾ. ಶೈಲಜಾ ಉಡಚಣ
ಗುಲಬರ್ಗಾ
ಸಾಲುದೀಪ, ಕಿರುಪ್ರಬಂಧ – ಬೆನ್ನುಡಿ/ ೨೦೦೪

ಮಾನವೀಯತೆಯ ಒಡಲಲ್ಲಿ ಅರಳುವ ಡಾ. ಜಿ.ಬಿ. ವಿಸಾಜಿ ಅವರ ಕಾವ್ಯ ಮನುಷ್ಯನ ಎಲ್ಲಾ ರೀತಿಯ ಕ್ರೌರ್ಯಗಳ ನಡುವೆಯೂ ಮಾನವೀಯತೆಯನ್ನು ಉಳಿಸಿಕೊಳ್ಳುವೆಡೆಗೆ ದುಡಿಯುತ್ತದೆ. ಈ ಮಾನವೀಯತೆಯೊಂದಿಗೆ ಸಮಕಾಲೀನತೆ ಸಹ ಇಲ್ಲಿಯ ಕಾವ್ಯ ಕ್ರಿಯೆಯಲ್ಲಿ ತೀವ್ರವಾಗಿ ಕೆಲಸಮಾಡಿದೆ.

ಡಾ. ವಿಕ್ರಮ ವಿಸಾಜಿ<br>
ಸ್ನಾತಕೋತ್ತರ ಕೇಂದ್ರ ನಂದಿಹಳ್ಳಿ<br>
ಮುಂಜಾವಿನಿಂದ ಮುಸ್ಸಂಜೆಯವರೆಗೆ, ಬೆನ್ನುಡಿ/೨೦೦೦

ಮಹಾಕವಿ ಬೇಂದ್ರೆ ಧಾರವಾಡದ ತುಂಬಾ ಕವಿ ಜೇನುಗಳನ್ನು ಸೃಷ್ಟಿಸಿದಂತೆ, ರಾಷ್ಟ್ರಕವಿ ಪುಟ್ಟಪ್ಪನವರು ಮೈಸೂರು ತುಂಬಾ ಕವಿಜೇನುಗಳನ್ನು ಹರಡಿದಂತೆ ರಾಯಚೂರಿನಲ್ಲಿ ಶ್ರೀ ಶಾಂತರಸರು, ಅದೇ ರೀತಿ ಭಾಲ್ಕಿಯಲ್ಲಿ ಶ್ರೀ ವಿಸಾಜಿಯವರು ರಾಣಿ ಜೇನಿನ ಸ್ವರೂಪದವರಂತೆ ಅಸಂಖ್ಯೆ ಮರಿಕವಿಗಳನ್ನು ಸೃಷ್ಟಿಸಿದ್ದಾರೆ.

ಶ್ರೀ ಬಿ. ಮಹಾದೇವಪ್ಪ<br>
ಗುಲಬರ್ಗಾ<br>
ಡಾ. ಜಿ.ಬಿ. ವಿಸಾಜಿ ಬದುಕು-ಬರಹ, ಪು. ಸಂ. ೦೭/ ೧೯೯೯

ಡಾ. ಜಿ.ಬಿ. ವಿಸಾಜಿಯವರು ಭಾಲ್ಕಿಯ ಡಿಗ್ರಿ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿರುವರು. "ಶೂನ್ಯ ಸಂಪಾದನೆಗಳು ಒಂದು ತೌಲನಿಕ ಅಧ್ಯಯನ" ವಿಷಯ ಕುರಿತು ಸಂಶೋಧನೆ ನಡೆಸಿ ಡಾಕ್ಟರೇಟ ಪದವಿ ಸಂಪಾದಿಸಿದ್ದಾರೆ. ಶ್ರೇಷ್ಠ ವಾಗ್ಮಿಗಳು, ಖ್ಯಾತ ಬರಹಗಾರರು ಆದ ಡಾ. ವಿಸಾಜಿಯವರು ಪತ್ರಕಾರರು, ಕವಿಗಳೂ ಕೂಡ ಆಗಿರುವರು.

ಭಾಲ್ಕಿಯ ಹಿರೇಮಠ ಸಂಸ್ಥಾನದ ಅಧಿಪತಿ ಶತಾಯುಷಿ ಡಾ. ಚನ್ನಬಸವ ಪಟ್ಟದ್ದೇವರು ಲಿಂಗವಂತ ಮಠಾಧೀಶರಲ್ಲಿ ಎದ್ದು ಕಾಣುವ ವ್ಯಕ್ತಿತ್ವ ಹೊಂದಿರುವರು. ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಕನ್ನಡ ಭಾಷೆ ಸಂಸ್ಕೃತಿಯ ಉಳಿವಿಗಾಗಿ ಬಹು ಹಿಂದೆಯೇ ಶ್ರಮಿಸಿದ ಕನ್ನಡಾಭಿಮಾನಿಗಳು, ಬಸವಾಭಿಮಾನಿಗಳೂ ಆದ ಡಾ. ಚನ್ನಬಸವ ಪಟ್ಟದ್ದೇವರು ಜೀವನ

ಹಾಗೂ ವಿವರಗಳನ್ನು ತೀರ ಸನಿಹದಲ್ಲಿದ್ದು ಅರಿತುಕೊಂಡು ಡಾ. ಜಿ.ಬಿ. ವಿಸಾಜಿ ಅವರು ಸರಳ ಭಾಷೆಯಲ್ಲಿ ನಿರೂಪಿಸಿದ್ದು ತುಂಬ ಸಮರ್ಪಕವಾಗಿದೆ''.

ಡಾ. ವ್ಹಿ.ಜಿ. ಪೂಜಾರ
ಗುಲಬರ್ಗಾ
ದೃಷ್ಟಿ ಕನ್ನಡ ದಿನ ಪತ್ರಿಕೆ /ಪು.ಸಂ.೦೩/ ದಿ. ೨೮/೦೨/೨೦೦೮

ಸಾಮಾಜಿಕ ಧಾರ್ಮಿಕ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆ ನೀಡಿರುವ ವಿಸಾಜಿ ಅವರು ತಮ್ಮ ೬೬ನೇ ವಯಸ್ಸಿನಲ್ಲಿಯು ಕ್ರಿಯಾಶೀಲರಾಗಿದ್ದಾರೆ. ಹೊಸ ಹೊಸ ತಂತ್ರಜ್ಞಾನವನ್ನು ಬಳಸಿಕೊಳ್ಳುವ ಚಾಕಚಕ್ಯತೆ ಹೊಂದಿದ್ದಾರೆ.

ಎಷ್ಟೋ ಜನರಿಗೆ ''ಬ್ಲಾಗ'' ಎಂಬುದೇ ಗೊತ್ತಿಲ್ಲ, ಹೀಗಿರುವಾಗ ತಮ್ಮ ಇಳಿವಯಸ್ಸಿನಲ್ಲಿಯು ಅಂತರಜಾಲವನ್ನು ಸಮರ್ಥವಾಗಿ ಬಳಸುತ್ತಿರುವ ಅಪರೂಪದ ವ್ಯಕ್ತಿ ವಿಸಾಜಿ.

ಶಶಿಕಾಂತ ಶೆಂಬೆಳ್ಳಿ, ಬೀದರ
ಪ್ರಜಾವಾಣಿ ದಿನ ಪತ್ರಿಕೆ/ಪು.ಸಂ.೦೩/ ದಿ. ೨೪/೦೮/೨೦೦೮

ಡಾ. ಜಿ.ಬಿ. ವಿಸಾಜಿಯವರು ''ಶೂನ್ಯ ಸಂಪಾದನೆ'' ಕುರಿತು ಸಂಶೋಧನೆ ನಡೆಸಿ ಪಿಎಚ್.ಡಿ ಪದವಿ ಪಡೆದಿದ್ದಾರೆ. ಭಾಲ್ಕಿಯ ಡಿಗ್ರಿ ಕಾಲೇಜಿನ ನಿವೃತ್ತ ಕನ್ನಡ ಪ್ರಾಧ್ಯಾಪಕರು, ಸಂಶೋಧಕರು, ವಾಗ್ಮಿಗಳು, ಸಾಹಿತಿ, ಬರಹಗಾರರು, ಪತ್ರಕಾರರೂ ಕೂಡ ಕನ್ನಡ ಸಂಘ-ಸಂಸ್ಥೆಗಳ ಸಂಘಟಕರು ಮಹಾಶರಣ ಉರಿಲಿಂಗ ಪೆದ್ದಿಯವರ ಜೀವನ ಸಾಧನೆಯನ್ನು ಸಾಮನ್ಯ ಓದುಗರಿಗೆ ಸಹೃದಯರಿಗೆ ಸರಳವಾಗಿ ಪರಿಚಯಿಸುವಲ್ಲಿ ಈ ಕಿರುಕೃತಿ ಸಫಲವಾಗಿದೆ.

ಪ್ರೊ. ಕಲ್ಯಾಣರಾವ ಜಿ. ಪಾಟೀಲ
'ಉರಿಲಿಂಗ ಪೆದ್ದಿ' ಬೆನ್ನುಡಿ/ ೨೦೦೬

ಉದಗೀರ ಸಂಗ್ರಾಮಪ್ಪನವರ ಹುಟ್ಟು, ಬಾಲ್ಯ, ಯೌವ್ವನ, ವಿದ್ಯಾಭ್ಯಾಸ, ಉದ್ಯೋಗ, ಸೇವೆ, ಸಾಹಸ, ಪರೋಪಕಾರಿ ಧಾರ್ಮಿಕ, ಸೇವಾಮನೋಭಾವ, ಹೋರಾಟಗಳನ್ನು ಕಣ್ಣಿಗೆ ಕಟ್ಟುವಂತೆ ಜಿ.ಬಿ. ವಿಸಾಜಿ ಅವರು ಬೀದರ ಭಾಷೆಯಲ್ಲಿಯೇ ಬರೆದಿದ್ದಾರೆ.

ರವೀಂದ್ರ ಕರ್ಜಗಿ
ನೂತನ ವಿದ್ಯಾಲಯ, ಗುಲಬರ್ಗಾ
ದೃಷ್ಟಿ ಕನ್ನಡ ದಿನ ಪತ್ರಿಕೆ/ಪು.ಸಂ.೦೩/ದಿ. ೧೧/೦೪/೨೦೦೮

ಪ್ರೊ.ಜಿ.ಬಿ. ವಿಸಾಜಿಯವರದು ಬಹುಮುಖ ವ್ಯಕ್ತಿತ್ವ. ಅವರೊಬ್ಬ ಮಾನವತಾವಾದಿ ಶ್ರೇಷ್ಠ ಸಾಹಿತಿ, ಕನ್ನಡದ ಪರಿಚಾರಕ. ಪ್ರೊ.ಜಿ.ಬಿ. ವಿಸಾಜಿಯವರು ಕನ್ನಡ ಸಾಹಿತ್ಯದ ಕೋಹಿನೂರ ವಜ್ರವೇ ಆಗಿದ್ದಾರೆ. ಹೃದಯ ಸಿರಿವಂತಿಕೆಯ ಉದಾತ್ತವ್ಯಕ್ತಿ ಕನ್ನಡಿಗರ ಕಣ್ಮಣಿಯಾದ ಅವರು ಭಾಲ್ಕಿ ಹಿರೇಮಠ ಸಂಸ್ಥಾನದ ಕಾಯಕಯೋಗಿ ಸಾಹಿತಿಗಳ ಹಿರಿಯಣ್ಣ. ಭಾಲ್ಕಿ ಹಾಗೂ ಬೀದರ ಜಿಲ್ಲೆಯ ಕನ್ನಡದ ಕಸ್ತೂರಿ ಸ್ವಾರ್ಥವಿಲ್ಲದೆ ಸಾರ್ಥಕದ ಬದುಕನ್ನು ಸವೆಸಿದ ಪ್ರೊ. ವಿಸಾಜಿಯವರು ಹಲವು ಕೌತುಕಗಳ ಖಣಿ. ನವ್ಯ ಸಾಹಿತ್ಯದ ಹರಿಕಾರರೆನಿಸಿ ಸ್ವಾವಲಂಬನೆಯ ಹಾದಿ ತೋರಿದಂತೆ ಅವರೊಬ್ಬ ಸರಳ ಸಜ್ಜನಿಕೆಯ ಸಾಹಿತಿ ನೈಜ ನೆಲಗಟ್ಟಿನ ಗಟ್ಟಿ ಸಾಹಿತ್ಯ ನೀಡಿದ ಅವರೊಬ್ಬ ಶ್ರೇಷ್ಠ ಚಿಂತಕರು ಹೌದು. ವಿಶಿಷ್ಟ ರೀತಿಯ ವಿದ್ವನ್ಮಣಿಯಾದ ಅವರೊಬ್ಬ ಹವ್ಯಾಸಿ ಪತ್ರಕರ್ತ ವಿನೋದ ಸಾಹಿತಿಯಾದ ಪ್ರೊ. ಜಿ.ಬಿ. ವಿಸಾಜಿ ಅವರು ಸಾರಸ್ವತ ಲೋಕದ ಮಲ್ಲಿಗೆ ಹೂವು. ಬಡತನದ ಮೂಸೆಯಲ್ಲಿ ಅರಳಿದ ಅವರು ಘನವ್ಯಕ್ತಿತ್ವವನ್ನು ರೂಢಿಸಿಕೊಂಡವರು. ಪ್ರೊ.ಜಿ.ಬಿ. ವಿಸಾಜಿಯವರೊಬ್ಬ ಸ್ನೇಹಮಯಿ, ಸಂಘಜೀವಿ. ಭಾಲ್ಕಿ ನೆಲದ ಕನ್ನಡದ ಕಿಂದರಜೋಗಿ ಅವರನ್ನು ಎಂದಿಗೂ ಮರೆಯಲಾಗದು. ಮರೆಯಬಾರದು.

ಡಾ. ಎಚ್.ಬಿ. ಎಸ್. ರಾಜನ
ಉತ್ತರ ಕರ್ನಾಟಕ ಕನ್ನಡಿಗರ ದಿನ ಪತ್ರಿಕೆ /ದಿ. ೬/೧೧/೨೦೦೫

ವಿಸಾಜಿಯವರು ಬೀದರ ಜಿಲ್ಲೆಯಲ್ಲಿ ಕನ್ನಡಪರ ಚಟುವಟಿಕೆಗಳಿಗೆ ಕಂಕಣಬದ್ಧರಾಗಿ ದುಡಿದ ಮಹನೀಯರು. "ಕನ್ನಡಕ್ಕೆ ಹೋರಾಡು ಕನ್ನಡದ ಕಂದ, ಕನ್ನಡವ ಕಾಪಾಡು ನನ್ನ ಆನಂದ" ಎನ್ನುವ ರಾಷ್ಟ್ರಕವಿ ಕುವೆಂಪು ಅವರ ವಾಣಿಗೆ ಅನ್ವಯವಾಗಬಲ್ಲ ಸಮರ್ಥ ವ್ಯಕ್ತಿತ್ವದವರು. ಎಲ್ಲವನ್ನು ಎಲ್ಲರನ್ನು ಬೆನ್ನುತಟ್ಟಿ ಪ್ರೋತ್ಸಾಹಿಸುವ ವಿಶಾಲ ಹೃದಯದ ವ್ಯಕ್ತಿ ಡಾ. ಜಿ.ಬಿ. ವಿಸಾಜಿ.

ಡಾ. ರಘುಶಂಖ ಭಾತಂಬ್ರಾ
ಕನ್ನಡದ ದೀಪ/ ಪು.ಸಂ. ೧೪೨/ ೨೦೦೬

ತಮ್ಮ ಮಾನವೀಯ ಅಂತಃಕರಣ, ಮುಂದಿನ ಪೀಳಿಗೆಯ ಬಗೆಗಿನ ಕಳಕಳಿ, ಶಿಸ್ತು, ಸಮಯಪ್ರಜ್ಞೆ ಎಲ್ಲ ಅನುಕರಣೀಯ ತಮ್ಮ ಕುವರ ನಿಜಕ್ಕೂ "ವಿಕ್ರಮ" ನಾಗಿ ಬೆಳೆಯುತ್ತಾನೆ ಎಂಬ ಭರವಸೆ ನನಗಿದೆ.

ಡಾ. ಈಶ್ವರಯ್ಯ ಮಠ
ವ್ಹಿ.ಜಿ. ಮಹಿಳಾ ಕಾಲೇಜು, ಗುಲಬರ್ಗಾ
ದೃಷ್ಟಿ ಕನ್ನಡ ದಿನ ಪತ್ರಿಕೆ ಪು.ಸಂ. ೦೩ /ದಿ. ೨೮/೦೨/೦೮

ಒಂದು ನಾಡಿನ ಸಾಹಿತ್ಯ ಸಂಗೀತ, ಕಲೆ, ಸಂಸ್ಕೃತಿಗೆ ಜೀವತುಂಬಲು ಪ್ರತಿಭಾವಂತ ಸಾಂಸ್ಕೃತಿಕ ನಾಯಕರು ಬೇಕು ಇವರಿಂದ ಜನಜೀವನ ಉತ್ತಮವಾಗುತ್ತದೆ. ನಾಡಿನ ಕೀರ್ತಿ ಬೆಳೆಯುತ್ತದೆ. ಅವರು ಚಿನ್ನದಂತೆ ಎಲ್ಲಿದ್ದರೂ ಬೆಲೆಬಾಳುತ್ತಾರೆ. ವಿದ್ವಾಂಸರು ತಮ್ಮ ವಿದ್ಯೆಯ ಸದ್ಬಳಕೆಮಾಡಿಕೊಂಡಾಗ ಹೆಚ್ಚಿನ ಮೆರಗು ಬರುತ್ತದೆ.

ಡಾ.ಜಿ.ಬಿ. ವಿಸಾಜಿ ಅವರು ತಮ್ಮಲ್ಲಿ ಸಾಹಿತ್ಯದ ಶಕ್ತಿಯನ್ನು ಸದ್ಬಳಿಕೆ ಮಾಡಿಕೊಂಡಿದ್ದಾರೆ. ಅವರು ಸ್ವಹಿತ ಮತ್ತು ಸಾಮಾಜಿಕ ಹಿತವನ್ನು ಬಯಸಿದ್ದಾರೆ. ಸಮಾಜದ ಸ್ವಾಸ್ಥ್ಯ ಕಾಪಾಡುವಲ್ಲಿ ಅವಿರತ ಶ್ರಮಿಸಿದ್ದಾರೆ. ಅದರಿಂದ ಸಾಹಿತ್ಯ ಬೆಳೆದಿದೆ. ಅವರೊಬ್ಬ ಸಾಂಸ್ಕೃತಿಕ ನಾಯಕರಾಗಿದ್ದಾರೆ. ಅವರ ಕನ್ನಡ ಸಾಹಿತ್ಯ ಸೇವೆ ಎಂದೂ ಮರೆಯಲಾಗದು.

ಗಣಪತಿ ಭೂರೆ

ಆನಂದವಾಡಿ

ಕನ್ನಡದ ದೀಪ/ಪು.ಸಂ. ೧೩೪/೨೦೦೬

ಪ್ರಾಧ್ಯಾಪಕ ಗುರುಲಿಂಗಪ್ಪಾ ವಿಸಾಜಿಯವರು ಕಲ್ಪನೆ ಮತ್ತು ಸತ್ಯಗಳನ್ನು ಮೂಲಾಧಾರ ಮಾಡಿಕೊಂಡಿದ್ದಾರೆ. ವಾಸ್ತವತೆಯನ್ನು ಮೂಡಿಸುವಲ್ಲಿ ದೊಡ್ಡ ಸಾಹಸವನ್ನೇ ಕೈಕೊಂಡಿದ್ದಾರೆ. ಪರಾನುಭೂತಿಗೂ ಸ್ಥಾನನೀಡಿ, ಒಂದು ಹೊಸ ಪ್ರಯೋಗ ಮಾಡಿದ್ದಾರೆ.

ಮೌನ ಸ್ವಭಾವ ಮತ್ತು ಸ್ಮಿತವದನದಿಂದ ಸಜ್ಜನಿಕೆ ಪ್ರಕಾಶಿಸುತ್ತದೆ. ನಾನು ನಮ್ಮ ಆತ್ಮೀಯ ಬಂಧು ವಿಸಾಜಿ ಅವರನ್ನು ಒಬ್ಬ ಸಫಲ ಕತೆಗಾರರ ರೂಪದಲ್ಲಿ ನೋಡಬಯಸುತ್ತೇನೆ.

ಎಸ್.ಎಂ. ಕಪ್ಪಿಕೆರಿ ಭಾಲ್ಕಿ

ಅನಂತ ಸಂಗಮ, ಮುನ್ನುಡಿ/೧೯೬೯

ಡಾ.ಜಿ.ಬಿ. ವಿಸಾಜಿ ಅವರು ನಮ್ಮ "ವಿಶ್ವಕಲ್ಯಾಣ"ದ ವ್ಯುತ್ಪತ್ತಿ ಎಂದು ಹೇಳಲು ಅವರ ಸಂಪಾದಕನಾದ ನನಗೆ ಹೆಮ್ಮೆ ಎನಿಸಿತು.

"ಸೂರ್ಯನಿಗೂ ಸೂರ್ಯನ ಬೆಳಕಿಗೂ, ಚಂದ್ರನಿಗೂ, ಚಂದ್ರನ ಬೆಳಕಿಗೂ, ದೀಪಕ್ಕೂ-ದೀಪ್ತಿಗೂ ಯಾವ ಸಂಬಂಧವಿದೆಯೋ ಅಷ್ಟೇ ಸಂಬಂಧ ಹಿರೇಮಠ ಸಂಸ್ಥಾನಕ್ಕೂ ಡಾ. ಜಿ.ಬಿ.ವಿಸಾಜಿಯವರಿಗೂ ಇದೆ."

ಪೂಜ್ಯ ಬಸವಲಿಂಗ ಪಟ್ಟದ್ದೇವರು

ದೃಷ್ಟಿ ಕನ್ನಡದಿನ ಪತ್ರಿಕೆ/ ಪು.ಸಂ.೦೩ /ದಿ. ೨೮/೦೨/೨೦೦೮

ಡಾ.ಜಿ.ಬಿ.ವಿಸಾಜಿ ಅವರು ಬೀದರ ಜಿಲ್ಲೆಯ ಹಿರಿಯ ಲೇಖಕರು. ತಾವು ಬೆಳೆಯುವುದರೊಂದಿಗೆ ಅನೇಕ ಲೇಖಕರನ್ನು ಬೆಳೆಸಿದವರು. ಬೀದರ ಜಿಲ್ಲೆಯ ಕನ್ನಡದ ಆಸ್ತಿ. ಅವರ ಬದುಕು–ಬರಹವನ್ನು ಈ ಗ್ರಂಥದ ಮೂಲಕ ಹಿಡಿದಿಡಲು ಪ್ರಯತ್ನಿಸಿದ್ದೇನೆ.

ಹೆಚ್.ಸಿ. ಖಡ್ಕೆ, ಭಾಲ್ಕಿ
ಡಾ.ಜಿ.ಬಿ. ವಿಸಾಜಿ ಬದುಕು–ಬರಹ, ಬೆನ್ನುಡಿ ೧೯೯೯

ಡಾ. ಜಿ.ಬಿ. ವಿಸಾಜಿಯವರು ಭಾಲ್ಕಿಯ ಚನ್ನಬಸವೇಶ್ವರ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುವದರೊಂದಿಗೆ ಅನೇಕ ಕೃತಿಗಳನ್ನು ಕೂಡ ರಚಿಸುತ್ತಲೆ ಯುವ ಬರಹಗಾರರಿಗೆ ಮಾರ್ಗದರ್ಶನ ನೀಡಿ ಯಾವತ್ತು ಕನ್ನಡತನವನ್ನು ಗಡಿಭಾಗದಲ್ಲಿ ಜಾಗೃತಗೊಳಿಸಿದ ಹಿರಿಯರಾದ ಡಾ. ವಿಸಾಜಿ ಅವರ ಬದುಕು–ಬರಹ ಕುರಿತು ಕನ್ನಡದ ದೀಪ ಅಭಿನಂದನಾ ಗ್ರಂಥವು ಶ್ರೀ ದೇಶಾಂಶ ಹುಡಗಿ ಮತ್ತು ಹಂಸಕವಿ ಅವರ ಸಂಪಾದಕತ್ವದಲ್ಲಿ ಅಭಿನಂದನ ಸಮಿತಿ ವತಿಯಿಂದ ಪ್ರಕಟವಾಗಿರುವುದು ತುಂಬ ಶ್ಲಾಘನೀಯ.

ಪ್ರೊ. ಸೂಗಯ್ಯ ಹಿರೇಮಠ
ಕನ್ನಡದ ದೀಪ ಗ್ರಂಥದ ಬೆನ್ನುಡಿ/೨೦೦೬

ಡಾ. ಜಿ.ಬಿ. ವಿಸಾಜಿ ಅವರು ಕನ್ನಡದ ವಿಭಾಗದ ಶಿರೋಮಣಿಯಾಗಿದ್ದಾರೆ. ಅವರು ವಿದ್ಯಾರ್ಥಿಗಳಲ್ಲಿ ಜ್ಞಾನದ ಜ್ಯೋತಿ ಬೆಳಗಿಸಿದ್ದಾರೆ. ವಿದ್ಯಾರ್ಥಿಗಳೇ ಅವರಿಗೆ ಸಂಪತ್ತು. "ಗುರು ಮತ್ತು ವಿದ್ಯಾರ್ಥಿಗಳಲ್ಲಿ ಆತ್ಮಿಯತೆ ಇರಬೇಕು, ಹೆದರಿಕೆ ಇರಬಾರದು ಅದರಿಂದ ಕಲಿಕೆ ಉತ್ತಮವಾಗುತ್ತದೆ." ಎಂಬ ತತ್ವವನ್ನು ಡಾ. ಜಿ.ಬಿ.ವಿಸಾಜಿಯವರು ನಂಬಿದವರಾಗಿದ್ದಾರೆ.

ವಿಸಾಜಿ ಅವರು ಸರಳ ಜೀವಿಗಳು, ಆಡಂಬರ ಪ್ರಿಯರಲ್ಲ. ಇವರ ಕೈಯಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳು ರ್‍ಯಾಂಕಿನಲ್ಲಿ ಉತ್ತೀರ್ಣರಾಗಿ ಹಿರಿಯ ಹುದ್ದೆಗಳಲ್ಲಿ ಕಾರ್ಯ ಮಾಡುತ್ತಿದ್ದಾರೆ.

ಶಿವಾಜಿ ಭಾತಂಬ್ರಾ
ಡಾ. ಜಿ.ಬಿ.ವಿಸಾಜಿ ಬದುಕು–ಬರಹ/ಮು.ಸಂ. ೮೩/೧೯೯೯

ಡಾ. ಜಿ.ಬಿ. ವಿಸಾಜಿ ಅವರದು ಬಹುಮುಖ ಪ್ರತಿಭೆ, ಅವರು ಉತ್ತಮ ಉಪನ್ಯಾಸಕರು, ಶ್ರೇಷ್ಠ ಮಟ್ಟದ ಭಾಷಣಕಾರರು ಅವರ ಮಾತುಗಳನ್ನು ಕೇಳಿದರೆ ಹತ್ತಾರು ಪುಸ್ತಕಗಳನ್ನು ಓದಿದ ಅನುಭವ ನಮ್ಮದಾಗುತ್ತದೆ. ಆದ್ದರಿಂದಲೇ ಅವರ ರೇಡಿಯೋ ಚಿಂತನೆಗಳು ಅನೇಕ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಸದಾ ಅಧ್ಯಯನಶೀಲ ಗುಣ ಅವರದು ಅವರು

ಸ್ನೇಹಜೀವಿಯಾಗಿದ್ದಾರೆ. ಕನ್ನಡ ಪ್ರೇಮಿಗಳಾಗಿದ್ದಾರೆ. ಬೀದರ ಜಿಲ್ಲೆಯ ಈ ಗಡಿಭಾಗದಲ್ಲಿ ಕನ್ನಡ ಬೆಳವಣಿಗೆಗಾಗಿ ಸದಾ ದುಡಿಯುತ್ತಿರುತ್ತಾರೆ. ಕನ್ನಡಕ್ಕಾಗಿ ದುಡಿಯುವವರಿಗೆ ಸಂಘ ಸಂಸ್ಥೆಗಳಿಗೆ ಬೆಂಬಲಿಸುತ್ತಿರುತ್ತಾರೆ. ಅವರು ಈ ಭಾಗದಲ್ಲಿ ಕನ್ನಡದ ಹಿರಿಯ ಚೇತನರಾಗಿದ್ದಾರೆ. ಅವರು ಕೇವಲ ಅವರ ಕುಟುಂಬಕ್ಕಾಗಿ ಮಾತ್ರವಲ್ಲ ಕನ್ನಡಕ್ಕಾಗಿ ಶ್ರಮಿಸುವವರಲ್ಲಿ ಒಬ್ಬರಾಗಿದ್ದಾರೆ.

ಪ್ರೊ. ಅಶೋಕ ಮೈನಾಳೆ
ದೃಷ್ಟಿ ಕನ್ನಡ ದಿನ ಪತ್ರಿಕೆ/ಪು.ಸಂ. ೦೩/ದಿ. ೩೦/೧೨/೦೭

ಹೈದ್ರಾಬಾದ ಕರ್ನಾಟಕದಲ್ಲಿ ಬಹಳ ಜನ ಉತ್ತಮ ಬರಹಗಾರರಿದ್ದಾರೆ. ಅವರೆಲ್ಲರೂ ಪರಸ್ಪರ ಕೂಡಿ ಒಂದು ಬಳಗ ಕಟ್ಟಬೇಕೆಂದು ಯತ್ನಿಸುತ್ತಿರುವಾಗ ಬೀದರ ಜಿಲ್ಲೆಯ ಕೋಹಿನೂರ ಗೆಳೆಯರು ತಮ್ಮದೆ ಆದ ಒಂದು ಗುಂಪು ಕಟ್ಟಿ 'ನೆಲದನುಡಿ'ಯ ಮುಖಾಂತರ ನಮಗೆ ಕಾಣಿಸಿಕೊಂಡು ಆದರ್ಶಪ್ರಾಯರಾಗಿದ್ದಾರೆ.

ಎ.ಕೆ. ರಾಮೇಶ್ವರ
ಗೋದುತಾಯಿ ನಗರ, ಗುಲಬರ್ಗಾ
ದೃಷ್ಟಿ ಕನ್ನಡದಿನ ಪತ್ರಿಕೆ/ಪು.ಸಂ. ೦೩/ ದಿ. ೧೧/೦೪/೦೮

ಈ ಎಲ್ಲಾ ಸಾಹಿತಿಗಳ ಮತ್ತು ಗಣ್ಯರ ಅಭಿಪ್ರಾಯಗಳನ್ನು ಓದಿದಾಗ ಡಾ. ಜಿ.ಬಿ.ವಿಸಾಜಿ ಅವರು ಒಬ್ಬ ಶ್ರೇಷ್ಠ ಬರಹಗಾರರೆಂದು ಗೊತ್ತಾಗುತ್ತದೆ.

## ಸಂದರ್ಶನ

ಈ ನಿಬಂಧ ಮಂಡನೆಗೆ "ಡಾ. ಜಿ.ಬಿ. ವಿಸಾಜಿ ಅವರ ಬದುಕು-ಬರಹ" ವಿಷಯವನ್ನು ಆಯ್ಕೆ ಮಾಡಿಕೊಂಡಾದ ಮೇಲೆ ಅವರೊಂದಿಗೆ ನೇರ ಸಂದರ್ಶನ ಮಾಡಿ ಅವರ ಬದುಕು ಬರಹದ ಬಗ್ಗೆ ಚರ್ಚಿಸಲಾಯಿತು. ಆ ಸಂದರ್ಶನದ ಕೆಲವು ಅಂಶಗಳು ಈ ಕೆಳಗಿನಂತಿವೆ.

ಪ್ರ – (೧) ನಿಮಗೆ ಸಾಹಿತ್ಯ ಕ್ಷೇತ್ರದಲ್ಲಿ ನೆಲೆಯೂರಲು ಪ್ರೇರಣೆಗಳು ಯಾವುವು?

ಉತ್ತರ : ನಮ್ಮ ತಂದೆಯವರು ಪುಸ್ತಕಗಳನ್ನು ಖರೀದಿಸಿ ನನ್ನಿಂದ ಓದಿಸುತ್ತಿದ್ದರು. ಹಬ್ಬ ಜಾತ್ರೆಗಳಾದ ಕೂಡಲೇ ಅದರ ಬಗ್ಗೆ ಮನೆಯಲ್ಲಿ ನಿಬಂಧ ಬರೆಸುತ್ತಿದ್ದರು. ಊರಲ್ಲಿ ಭಜನೆ ಪದಗಳು, ಗೀಗಿ ಪದಗಳನ್ನು ಕೇಳುತ್ತಿದ್ದರು. ನಾಟಕ, ಕೋಲಾಟ, ನೋಡುತ್ತಿದ್ದರು. ಮಾಧ್ಯಮಿಕ ಶಾಲೆಯಲ್ಲಿ ಕನ್ನಡ ಶಿಕ್ಷಕರಾದ ವೀರಣ್ಣ ಅಂಬಲಗಿ ತಮ್ಮ ಪಾಠ ಹೇಳುವಿಕೆಯಿಂದ, ಹಾರ್ಮೋನಿಯಂ ಬಾರಿಸುವಿಕೆಯಿಂದ, ನಾಟಕ ನಿರ್ದೇಶಿಸುವ ಮೂಲಕ ಕನ್ನಡದ ಕಡೆಗೆ ನನ್ನ ಗಮನವನ್ನು ಮೊದಲಿಗೆ ಸೆಳೆದರು. ಆನಂತರ ಪ್ರೌಢ ಶಾಲೆಯಲ್ಲಿ ಶ್ರೀ ಬಿ.ವ್ಹಿ. ಮಲ್ಲಾಪುರ ಅವರು ಪಾಠ ಹೇಳುವ ಮೂಲಕ ಕನ್ನಡ ಸಾಹಿತ್ಯದ ಕಡೆಗೆ ನನ್ನ ಮನಸ್ಸನ್ನು ಆಕರ್ಷಿಸಿದರು. ಅಂದಿನಿಂದ ಕನ್ನಡವೇ ನನ್ನ ಧ್ಯೇಯ ಮತ್ತು ಉಸಿರಾಯಿತು.

ಪ್ರ – (೨) ನಿಮ್ಮ ಹವ್ಯಾಸಗಳೇನು?

ಉತ್ತರ : ಓದುವುದು, ಬರೆಯುವುದು, ಚಿತ್ರಕಲೆ, ಸಂಗೀತ, ಚಲನಚಿತ್ರ, ನಾಟಕ, ಪತ್ರಿಕೋದ್ಯಮ ಇವು ನನ್ನ ಹವ್ಯಾಸಗಳು.

ಪ್ರ – (೩) ನೀವು ಕುವೆಂಪು ಅವರನ್ನು ಭೇಟ್ಟಿಯಾಗಿದ್ದೀರಾ?

ಉತ್ತರ : ಬೆಂಗಳೂರಿನಲ್ಲಿ ನಡೆದ ಅದ್ದೂರಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ದೇ. ಜವರೇಗೌಡರು ವಹಿಸಿದ್ದರು. ಆ ಸಮಾರಂಭಕ್ಕೆ ರಾಷ್ಟ್ರಕವಿ ಕುವೆಂಪು ಅವರು ಆಗಮಿಸಿ ಭಾಷಣ ಮಾಡಿದ್ದು ಕೇಳಿದ್ದೆ. ಆಗ ನಾನು ಭಾಲ್ಕಿ ತಾಲ್ಲೂಕ ಸಮಿತಿಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ಭಾಗವಹಿಸಿದ್ದೇನೆ.

ಇನ್ನೊಮ್ಮೆ ಬೆಂಗಳೂರಿಗೆ ಮಹಿಳಾ ವರ್ಷದ ಸಮಾರಂಭಕ್ಕೆ ಹೋದಾಗ ಮೈಸೂರಿಗೆ ಹೋಗಿದ್ದೆ. ಮೈಸೂರು ವಿಶ್ವವಿದ್ಯಾಲಯದಲ್ಲಿ ನನ್ನ ಗೆಳೆಯ ಕೃಷ್ಣಕುಮಾರ ಇದ್ದರು ಅವರ ಹತ್ತಿರ ಸ್ವಂತ ಕಾರಿತ್ತು. ಕುವೆಂಪು ಅವರ ಮನೆ ಕುವೆಂಪು ಅವರನ್ನು ನೋಡುವ ನನ್ನ ಬಯಕೆ ಆತನಿಗೆ ತಿಳಿಸಿದೆ. ಅವರು ಸುಲಭವಾಗಿ ಯಾರನ್ನೂ ಭೇಟ್ಟಿಯಾಗುವುದಿಲ್ಲ ಎಂದು ಹೇಳಿದ ಅವರ

ಮನೆಯ ಬಾಗಿಲಾದರು ನೋಡಿ ಬರೋಣ ನಡಿ ಎಂದು ಹೋದೆವು. ಕುವೆಂಪು ಅವರು "ಉದಯ ರವಿ" ಮನೆಯ ಹೂದೋಟದಲ್ಲಿ ನಿಂತಿದ್ದರು. ನೆಹರು ಶರ್ಟ, ಪೈಜಾಮ ತೊಟ್ಟಿದ್ದರು. ಬಿಳಿಯ ಖಾದಿ ಉಡುಪು, ಒಳಗೆ ಕರೆದರು ಅವರ ಪುಸ್ತಕ ಭಂಡಾರ, ಜ್ಞಾನ ಪೀಠ ಪ್ರಶಸ್ತಿ ಕಣ್ಣಿಗೆ ಬಿದ್ದವು ಅಲ್ಲಿಯೇ ಮೂರು ಬೆತ್ತದ ಕುರ್ಚಿಗಳು ನಮ್ಮನ್ನು ಕೂಡಿಸಿ ಕ್ಷೇಮ ಸಮಾಚಾರ ವಿಚಾರಿಸಿದರು. "ತಾವು ಈಗ ಏನು ಬರೆಯುತ್ತಿದ್ದೀರಿ" ಎಂದು ಕೇಳಿದೆ. ಅವರು ತಮ್ಮ ಆತ್ಮಚರಿತ್ರೆ "ನೆನಪಿನ ದೋಣಿ" ಬರೆಯುತ್ತಿರುವುದಾಗಿ ಹೇಳಿದರು. ಮುಂದೆ ಜಗತ್ತಿನಲ್ಲಿಯೇ ದೊಡ್ಡದಾದ ಕಾದಂಬರಿ ಬರೆಯುವ ಯೋಜನೆ ಇರುವುದಾಗಿ ತಿಳಿಸಿದರು. "ಮನುಷ್ಯ ಅಂದುಕೊಂಡದ್ದೆಲ್ಲ ಒಂದೇ ಜನ್ಮದಲ್ಲಿ ಮಾಡಿ ಮುಗಿಸಲು ಸಾಧ್ಯವಿಲ್ಲ" ಎಂದು ನುಡಿದರು. ಅವರ ಬೃಹತ ಕಾದಂಬರಿಯ ಕನಸು ನನಸಾಗಲೆ ಇಲ್ಲ. ಅಂತಹ ಮಹಾ ಕವಿಯೊಡನೆ ಹತ್ತಿರದಿಂದ ಮಾತನಾಡಿದ ಅಪೂರ್ವ ಸಂದರ್ಭ ಇಂದಿಗೂ ಮಾಸದೆ ಉಳಿದಿದೆ.

ಪ್ರ – (೪) ಶಿಕ್ಷಣ ರಂಗದಲ್ಲಿ ನೀವು ಯಾವುದಕ್ಕೆ ಪ್ರಾಧ್ಯಾನ್ಯ ನೀಡಬೇಕು ಎನ್ನುತ್ತೀರಿ?

ಉತ್ತರ : "ಶಿಕ್ಷಣ ರಂಗದಲ್ಲಿ ಬೋಧಕ ದೊಡ್ಡವನಾಗಬಾರದು, ಬೋಧನಾ ವಸ್ತುವೂ ದೊಡ್ಡದಾಗಬಾರದು, ಕಲಿಯುವ ಮಗುವೇ ಪ್ರಧಾನವಾಗಬೇಕು" ಎಂಬ ರವೀಂದ್ರನಾಥ ಟಾಗೋರರ ಮಾತು ನನಗೆ ಪ್ರಿಯವಾಗಿದೆ.

ಪ್ರ – (೫) ಅಕ್ಕ ಸಮ್ಮೇಳನ ಕುರಿತು ನಿಮ್ಮ ಅನಿಸಿಕೆ ಏನು ?

ಉತ್ತರ : ಅಕ್ಕ ಸಮ್ಮೇಳನ ಏರ್ಪಡಿಸುವುದು ತಪ್ಪಲ್ಲ ವಿದೇಶದಲ್ಲಿ ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿಗಳ ಬಗ್ಗೆ ಅಲ್ಲಿಯ ಜನರಿಗೆ ತಿಳುವಳಿಕೆಯನ್ನುಂಟುಮಾಡಿ, ತಮ್ಮ ನಾಡಿನ ಬಗ್ಗೆ ಈ ಸಮ್ಮೇಳನ ಹೆಮ್ಮೆ ಮೂಡಿಸುವಂತಾಗಬೇಕು. ಆದರೆ ಅಕ್ಕ ಸಮ್ಮೇಳನ ನೆಪದಲ್ಲಿ ಅನಾವಶ್ಯಕ ಪ್ರತಿನಿಧಿಗಳು ಹೋಗಿ ರಾಜ್ಯದ ಹಣವನ್ನು ಪೋಲು ಮಾಡುವಂತಾದರೆ ಆ ಸಮ್ಮೇಳನದ ಉದ್ದೇಶವು ಸಾರ್ಥಕವಾಗುವುದಿಲ್ಲ. ಆದ್ದರಿಂದ ಸಮ್ಮೇಳನಕ್ಕೆ ಹೋಗಲು ಯೋಗ್ಯ ಪ್ರತಿನಿಧಿಗಳ ಆಯ್ಕೆಯಾಗಬೇಕು.

ಪ್ರ – (೬) ಇತ್ತೀಚಿಗೇ ದೇಶದಲ್ಲಿ ಬಾಂಬದಾಳಿ ನಡೆಯುತ್ತಿದೆ ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಉತ್ತರ : ಈ ಬಾಂಬದಾಳಿ ಆತ್ಮಾಹುತಿ ಪಡೆಗಳ ವಿಧ್ವಂಸಕ ಕೃತ್ಯವಾಗಿದೆ ಅದು ಇಡೀ ವಿಶ್ವಕ್ಕೆ ಕಂಟಕ ಪ್ರಾಯವಾದ ಸಮಸ್ಯೆಯಾಗಿದೆ. ಇದರಿಂದ ಮುಗ್ಧ ಜನರು ಬಲಿಯಾಗುತ್ತಿದ್ದಾರೆ. ಈ ಆತಂಕವಾದ ನಿಲ್ಲಬೇಕು ದೇಶದಲ್ಲಿ ಶಾಂತಿ ಕೋಮು ಸಾಮರಸ್ಯ ಬೆಳೆಯಬೇಕು.

ಪ್ರ – (೭) ಕನ್ನಡ ಶಾಸ್ತ್ರೀಯ ಭಾಷೆ ಸ್ಥಾನ–ಮಾನ ಕುರಿತು ಅಭಿಪ್ರಾಯವೇನು?

ಉತ್ತರ : ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ಮಾನ ಸಿಗಲೇಬೇಕು. ಕನ್ನಡ ಸಾಹಿತ್ಯ ಅದಕ್ಕೆ ಅರ್ಹವಾಗಿದೆ. ಕನ್ನಡಿಗರ ಈ ಸೌಲಭ್ಯಕ್ಕೆ ಕೆಲವರು ಅಡ್ಡಿಯನ್ನುಂಟು ಮಾಡುತ್ತಿರುವುದು ದುರದೃಷ್ಟಕರ. ನಮ್ಮ ರಾಜಕೀಯ ಮುಖಂಡರು, ಸಾಹಿತಿಗಳು, ಜನತೆ, ಕನ್ನಡ ಶಾಸ್ತ್ರೀಯ ಭಾಷೆಯ ಸ್ಥಾನ–ಮಾನ ಪಡೆದುಕೊಳ್ಳುವಂತೆ ಕೇಂದ್ರದ ಮೇಲೆ ಒತ್ತಾಯ ತರಬೇಕಾಗಿದೆ.

ಪ್ರ – (೮) ಕನ್ನಡ ಸಾಹಿತ್ಯ ಪರಿಷತ್ತಿನ ಬಗ್ಗೆ ನಿಮ್ಮ ಅನಿಸಿಕೆಯೇನು ?

ಉತ್ತರ : ಕನ್ನಡ ಸಾಹಿತ್ಯ ಪರಿಷತ್ತು ಎಲ್ಲಾ ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಯಾಗಿದೆ. ಅದರ ಚಟುವಟಿಕೆಗಳು ಚುರುಕಾಗಬೇಕು. ನಿಜವಾದ ಅರ್ಥದಲ್ಲಿ ಅದು ಎಲ್ಲಾ ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಯಾಗಬೇಕು. ಸಮ್ಮೇಳನಗಳು ಕೇವಲ ಜಾತ್ರೆಗಳಾಗಬಾರದು. ಪರಿಷತ್ತು ಕಾಲಬದ್ಧ ಯೋಜನೆಗಳನ್ನು ಹಾಕಿಕೊಳ್ಳಬೇಕು. ಚಟುವಟಿಕೆಗಳನ್ನು ತಾಲ್ಲೂಕು, ಹೋಬಳಿ, ಗ್ರಾಮ ಮಟ್ಟದಲ್ಲಿ ಬೆಳೆಸಬೇಕು. ಗಡಿಭಾಗದಲ್ಲಿ ಕನ್ನಡ ಡಿಂ ಡಿಂ ಮೊಳಗಬೇಕು. ಇನ್ನು ಮುಂದೆ ತಾಲ್ಲೂಕು ಅಧ್ಯಕ್ಷರನ್ನು ಮತ ಹಾಕಿ ಚುನಾಯಿಸುವಂತಾಗಬೇಕು. ಕೆಲವು ಆಯ್ದ ಸಾಹಿತಿಗಳಿಂದ, ಕಲಾವಿದರಿಂದ, ಎಲ್ಲಾ ಕಡೆಯಲ್ಲಿಯು ನಿರಂತರ ಕನ್ನಡ ಕಾರ್ಯಕ್ರಮಗಳು ಜರುಗಬೇಕು. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ಪುಸ್ತಕ ಮರಾಟದ ಸಂಚಾರಿ ವಾಹನ ಸದಾ ರಾಜ್ಯದಲ್ಲೆಲ್ಲ ಸುತ್ತಾಡುತ್ತಿರಬೇಕು. ದತ್ತಿ ನಿಧಿಗಳನ್ನು ಹೆಚ್ಚಿಸಿ ನಿರಂತರ ಕನ್ನಡ ಚಟುವಟಿಕೆಗಳು ನೆರವೇರುವಂತೆ ನೋಡಿಕೊಳ್ಳಬೇಕು.

ಪ್ರ – (೯) ಬೀದರ ಜಿಲ್ಲೆಯ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಯಾವ ಯಾವ ಕಾರ್ಯಗಳಾಗಬೇಕು ?

ಉತ್ತರ : ಬೀದರ ಜಿಲ್ಲೆಯಲ್ಲಿ ಭಾಷಾಂತರ ಕಾರ್ಯ ಭರದಿಂದ ನಡೆಯಬೇಕಾಗಿದೆ. ಏಕೆಂದರೆ ಜಿಲ್ಲೆಯಲ್ಲಿ ಮತ್ತು ಸುತ್ತುಮುತ್ತಲಿನ ಮರಾಠಿ, ತೆಲುಗು, ಉರ್ದು, ಭಾಷೆಯ ಲೇಖಕರಿದ್ದಾರೆ. ಅವರ ಪರಿಚಯ ನಮಗಿಲ್ಲ, ನಮ್ಮ ಪರಿಚಯ ಅವರಿಗಿಲ್ಲ, ಆದ್ದರಿಂದ ಅನುವಾದ ಕಾರ್ಯದ ಮೂಲಕ ಒಬ್ಬರಿಗೊಬ್ಬರು ಪರಿಚಯವಾಗಬೇಕು. ಇದರಿಂದ ಭಾವೈಕ್ಯತೆ, ಕೋಮುಸೌಹಾರ್ದತೆ ಬೆಳೆಯುತ್ತದೆ. ಎಲ್ಲ ಭಾಷೆಗಳು ಮತ್ತು ಸಾಹಿತ್ಯ ಶ್ರೀಮಂತವಾಗುತ್ತದೆ.

ಪ್ರ – (೧೦) ತಾವು ಬೀದರ ಜಿಲ್ಲಾ ಆರನೆ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದಾಗ ಏನನ್ನಿಸಿತು?

ಉತ್ತರ : ಸಾಹಿತಿಗಳಿಗೆ ಜಿಲ್ಲಾ ಮಟ್ಟದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ಜಿಲ್ಲೆಯಲ್ಲಿಯೇ ಶ್ರೇಷ್ಠವಾದ ಗೌರವಸ್ಥಾನ ನನಗೆ ಸಂತೋಷವಾಯಿತು. ನಮ್ಮ ಜನರು ಸೇವೆಯನ್ನು

ಗುರುತಿಸುತ್ತಾರೆ. ಗೌರವಿಸುತ್ತಾರೆ. ಎಂಬುದನ್ನು ಅರಿತು ನಮ್ಮವರ ಬಗ್ಗೆ ನನ್ನಲ್ಲಿ ಗೌರವ ಪ್ರೀತಿ ಮತ್ತಷ್ಟು ಹೆಚ್ಚಾಗಿದೆ.

ಪ್ರ – (೧೧) ಬೀದರ ಜಿಲ್ಲೆಯ ಯುವ ಸಾಹಿತಿಗಳಿಗೆ ನಿಮ್ಮ ಸಂದೇಶವೇನು ?

ಉತ್ತರ : ಬೀದರ ಜಿಲ್ಲೆಯ ಜನಗಳಿಗೆ ತಮ್ಮದೆ ಆದ ಆಶೋತ್ತರಗಳಿವೆ. ಸಂಪನ್ಮೂಲಗಳಿವೆ. ಸಾಧ್ಯತೆಗಳಿವೆ. ಇವುಗಳನ್ನು ಅರ್ಥಪೂರ್ಣವಾಗಿ ದುಡಿಸಿಕೊಳ್ಳುವುದಕ್ಕೆ ನಾವು ಪ್ರಯತ್ನ ಮಾಡಬೇಕು. ಎಲ್ಲಾ ಬಗೆಯ ಗಾಳಿ, ಬೆಳಕು, ಸತ್ವಗಳನ್ನು ಬಳಸಿಕೊಂಡು ಇಲ್ಲಿ ಬರೆಯುವ ಸಾಹಿತಿ ಇಲ್ಲಿಯ ಸಾಹಿತಿಯಾಗಬೇಕು. ಇಲ್ಲಿಯ ಆವರಣಕ್ಕೆ, ಇಲ್ಲಿಯ ಅಗತ್ಯಗಳಿಗೆ, ನೋವು ಹಂಬಲಗಳಿಗೆ, ಸ್ಪಂದಿಸಬೇಕು. ನಾವು ಸ್ಥಳೀಯ ಸಂಸ್ಕೃತಿಯಿಂದಲೇ ಸಹಜವಾಗಿ ವಿಕಸಿತಗೊಳ್ಳಬೇಕು.

# ಅಧ್ಯಾಯ – ೬

## ಸಮಾರೋಪ

ಕನ್ನಡ ಸಾಹಿತ್ಯಕ್ಕೆ ೧೫೦೦ ವರ್ಷ ಸುದೀರ್ಘ ಸಂಪದ್ಭರಿತ ಇತಿಹಾಸವಿದೆ. ಡಾ. ದ.ರಾ. ಬೇಂದ್ರೆ ಹೇಳಿದಂತೆ "ಜೈನರ ಕಾವ್ಯದ ಶರಣರ ವಚನದ ದಾಸರ ಹಾಡಿನ ಈ ನಾಡು" ಪಂಪ, ಪೊನ್ನ, ರನ್ನ, ಜನ್ನ, ನಾಗಚಂದ್ರ, ರತ್ನಾಕರವರ್ಣಿ ಇತ್ಯಾದಿ ಜೈನಕವಿಗಳು ಕನ್ನಡಕ್ಕೆ ಶ್ರೇಷ್ಠ ಸಾಹಿತ್ಯ ನೀಡಿದ್ದಾರೆ. ನಂತರ ಬಂದ ಬಸವ, ಅಲ್ಲಮ, ಅಕ್ಕಮಹಾದೇವಿ ಚನ್ನಬಸವ, ಸಿದ್ಧರಾಮ, ಮುಂತಾದವರು ವಚನಗಳನ್ನು ಬರೆದು ವಿಶ್ವ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಮುಂದೆ ಪುರಂದರದಾಸ ಕನಕದಾಸ, ವಿಜಯದಾಸ, ಮುಂತಾದವರು ಹಾಡಿನೊಂದಿಗೆ ಮನೆಮನೆಗೆ ದಾಸ ಸಾಹಿತ್ಯವನ್ನು ಹರಡಿಸಿದ್ದಾರೆ. ಸರ್ವಜ್ಞ, ಸಂಚಿಯ ಹೊನ್ನಮ್ಮ, ಮುದ್ದಣ್ಣ ಕನ್ನಡ ಸಾಹಿತ್ಯ ಬೆಳೆಸಿದ್ದಾರೆ. ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ, ಪುತಿನ, ಸಿದ್ಧಯ್ಯ ಪುರಾಣಿಕ್, ಅನೇಕ ದಿಗ್ಗಜರು ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಅನಕೃ, ತರಾಸು, ಬಸವರಾಜ ಕಟ್ಟಿಮನಿ ನಿರಂಜನ ಮುಂತಾದವರು ಪ್ರಗತಿಶೀಲ ಸಾಹಿತ್ಯವನ್ನಿತ್ತು. ಕನ್ನಡದ ಹೋರಾಟ ಬಂದಾಗ ತಮ್ಮ ಭಾಷಣಗಳ ಮೂಲಕ ಬೆಂಕಿವುಂಡೆಯಂತೆ ಮಾತುಗಳನ್ನು ಹೊರಹೊಮ್ಮಿಸಿದ್ದಾರೆ. ನವ್ಯ ಸಾಹಿತ್ಯದಲ್ಲಿ ಯು.ಆರ್. ಅನಂತಮೂರ್ತಿ, ಲಂಕೇಶ, ರಾಮಚಂದ್ರ ಶರ್ಮಾ, ಎ.ಕೆ. ರಾಮಾನುಜ, ಪೂ.ಚ. ತೇಜಸ್ವಿ ಚಂದ್ರ ಶೇಖರ ಕಂಬಾರ, ಚಂದ್ರಶೇಖರ ಪಾಟೀಲ ಮುಂತಾದವರು ಗಟ್ಟಿ ಸಾಹಿತ್ಯವನ್ನು ನೀಡಿದ್ದಾರೆ. ಬರಗೂರು ರಾಮಚಂದ್ರಪ್ಪ, ಸಿದ್ಧಲಿಂಗಯ್ಯಾ, ದೇವನೂರು ಮಹಾದೇವ ಮುಂತಾದವರು ಬಂಡಾಯ ಮತ್ತು ದಲಿತ ಸಾಹಿತ್ಯದ ಲೇಖಕರಾಗಿದ್ದಾರೆ. ಭಾರತೀಯ ಸಾಹಿತ್ಯದಲ್ಲಿಯ ಕನ್ನಡಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಜ್ಞಾನಪೀಠ ಪ್ರಶಸ್ತಿ ದೊರಕಿದೆ. ಕುವೆಂಪು, ದ.ರಾ. ಬೇಂದ್ರೆ, ಶಿವರಾಮ ಕಾರಂತ, ಮಾಸ್ತಿ ವೆಂಕಟೇಶ ಅಯ್ಯಂಗಾರ, ವಿಕೃ ಗೋಕಾಕ್, ಯು.ಆರ್. ಅನಂತಮೂರ್ತಿ, ಗಿರೀಶ ಕಾರ್ನಾಡ, ಜ್ಞಾನಪೀಠ ಪ್ರಶಸ್ತಿ ಪಡೆದವರಾಗಿದ್ದಾರೆ. ಜ್ಞಾನಪೀಠ ಪ್ರಶಸ್ತಿಗೆ ಅರ್ಹರಾದ ಇನ್ನೂ ಅನೇಕ ಸಾಹಿತಿಗಳು ಕನ್ನಡದಲ್ಲಿದ್ದಾರೆ. ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಎಸ್.ಎಲ್. ಭೈರಪ್ಪ, ಚಂದ್ರಶೇಖರ ಕಂಬಾರ, ಚನ್ನವೀರ ಕಣವಿ, ಮುಂತಾದವರನ್ನು ಹೆಸರಿಸಬಹುದು.

ಎಂ. ಗೋವಿಂದ ಪೈ, ಕುವೆಂಪು, ಜಿ.ಎಸ್. ಶಿವರುದ್ರಪ್ಪ ಅವರನ್ನು ಕ್ರಮವಾಗಿ ಕರ್ನಾಟಕ ಸರ್ಕಾರ ರಾಷ್ಟ್ರಕವಿಗಳೆಂದು ಗೌರವಿಸಿದೆ. ಕನ್ನಡ ಸಾಹಿತ್ಯ ಅತ್ಯಂತ ಪ್ರಾಚೀನವು, ಸಮೃದ್ಧವೂ ಆಗಿದೆ. ಕನ್ನಡ ಸಾಹಿತ್ಯ ಉನ್ನತ ಜೀವನ ಮೌಲ್ಯಗಳನ್ನು ಸಾರಿದೆ. ಕನ್ನಡ ನಾಡು, ಶಾಂತಿ, ಸೌಹಾರ್ದತೆಯ ನಾಡಾಗಿದೆ. ಸರ್ವ ಜನಾಂಗದ ಶಾಂತಿಯ ತೋಟವಾಗಿದೆ. ಕನ್ನಡ ನಾಡು ಚೆಲುವಿನ ಬೀಡಾಗಿದೆ.

ಇಂದು ಕನ್ನಡ ಸಾಹಿತ್ಯದಲ್ಲಿ ಗದ್ಯ ಸಾಹಿತ್ಯ, ಬೃಹತ್ ವೃಕದಂತೆ ಬೆಳೆಯುತ್ತಿದೆ. ಕಾವ್ಯ, ನಾಟಕ, ಪ್ರಬಂಧ, ಜೀವನ ಚರಿತ್ರೆ, ಆತ್ಮಕಥೆ, ಪ್ರವಾಸ ಸಾಹಿತ್ಯ ಲಲಿತ ಪ್ರಬಂಧಗಳು ಕೊಂಬೆ ಕೊಂಬೆಗಳಾಗಿ ಹರಡುತ್ತಿದೆ. ಕನ್ನಡ ಸಾಹಿತ್ಯದಲ್ಲಿ ಹೊಸ ಕವಲುಗಳಾದ ವ್ಯಕ್ತಿತ್ವ ವಿಕಸನ ಸಾಹಿತ್ಯ, ಅನುವಾದ ಸಾಹಿತ್ಯ, ಜಿಡ್ಡು ಕೃಷ್ಣಮೂರ್ತಿ, ಓಶೋ ಸಾಹಿತ್ಯ, ರವಿಶಂಕರ ಸಾಹಿತ್ಯ ಭಕ್ತಿ ಪಂಥ, ಮೊದಲಾದ ಸಾಹಿತ್ಯ ಕನ್ನಡದಲ್ಲಿ ಹರಿದು ಬಂದಿದೆ. ಕನ್ನಡದಲ್ಲಿ ಕಾವ್ಯ ಪ್ರಪಂಚ ಮೊದಲಿನಿಂದಲು ದೊಡ್ಡದಾಗಿ ಬೆಳೆದುಬಂದಿದೆ. ಕನ್ನಡದಲ್ಲಿ ಮಹಾಕಾವ್ಯಗಳು ಹೊರಬರುತ್ತಲಿವೆ. ಕನ್ನಡ ಸಾಹಿತ್ಯದಲ್ಲಿ ಹೊಸ ಪ್ರತಿಭೆಗಳಿಗೆ ಕೊರತೆ ಇಲ್ಲ ಇತ್ತೀಚಿನ ಕವಿಗಳಲ್ಲಿ ಪ್ರತಿಭಾ ನಂದಕುಮಾರ, ಎಸ್.ಮಂಜುನಾಥ, ಆನಂದ ಝುಂಜರವಾಡಾ, ವಿಕ್ರಮ ವಿಸಾಜಿ, ಚಂದ್ರು ತುರುವಿಹಾಳ ಪ್ರಮುಖರಾಗಿದ್ದಾರೆ. ಇತ್ತೀಚೆಗೆ ಬೌದ್ಧ ಸಾಹಿತ್ಯ ಕುರಿತು ಉತ್ಸಾಹದಿಂದ ಲೇಖಕರು ಕಾರ್ಯ ಮಾಡುತ್ತಿದ್ದಾರೆ. ತತ್ವಶಾಸ್ತ್ರ ಕುರಿತು ಅರವಿಂದ, ಗಾಂಧೀಜಿ ಕುರಿತು ಅವರ ಸಮಗ್ರ ಸಾಹಿತ್ಯವು ಕನ್ನಡಕ್ಕೆ ಒದಗಿಬರಬೇಕಾಗಿದೆ. ಇಂದು ಇಡೀ ಜಗತ್ತು ಒಂದು ಹಳ್ಳಿಯಂತಾಗಿದೆ. ನಾವು ಜಾಗತಿಕ ಸ್ಪರ್ಧೆಗೆ ಸಿದ್ಧರಾಗಬೇಕಾಗಿದೆ.

ಕನ್ನಡದಲ್ಲಿ ಸಾಹಿತ್ಯ ಸೃಷ್ಟಿ ಸಂಪದ್ಭರಿತವಾಗಿದೆ. ಅಧ್ಯಯನ ಆಸಕ್ತರಿಗೆ ಸಾಹಿತ್ಯ ಕೃತಿಯಂತೆ ಸಾಹಿತಿಯು ಹತ್ತಿರವಾಗಬೇಕು. ಸಾಹಿತ್ಯದ ಜೊತೆಜೊತೆಗೆ ಕವಿಯ ಬದುಕು ಮಿಳಿತವಾಗಬೇಕು. ಲೇಖಕರ ಬದುಕಿನೊಂದಿಗೆ ಅವರ ಸಾಹಿತ್ಯದ ಅಧ್ಯಯನವು ನಡೆದರೆ ಸಮಗ್ರತೆಗೆ ಇಂಬು ದೊರಕುತ್ತದೆ.

ಈ ನಿಟ್ಟಿನಲ್ಲಿ ಬೀದರ ಜಿಲ್ಲೆಯ ಆಧುನಿಕ ಕಾಲದ ಪ್ರಥಮಾವಧಿಯ ಹಿರಿಯ ಲೇಖಕರಲ್ಲಿ ಒಬ್ಬರಾದ ಡಾ. ಜಿ.ಬಿ. ವಿಸಾಜಿ ಅವರ ಬದುಕು–ಬರಹ ಸಾಹಿತ್ಯದ ಅಧ್ಯಯನ ಕೈಗೊಳ್ಳುವುದು ಅಗತ್ಯವಾಗಿದೆ. ಈ ಪ್ರಬಂಧದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕರಿಯು ಕನ್ನಡಿಯೊಳಗೆ ಹಿಡಿದಂತೆ ತಿಳಿಸಲಾಗಿದೆ. ಡಾ. ಜಿ.ಬಿ. ವಿಸಾಜಿ ಅವರ ಮನೆತನ, ಬಾಲ್ಯ, ಶಿಕ್ಷಣ, ವೃತ್ತಿ ಜೀವನ, ಕೌಟುಂಬಿಕ ಜೀವನ, ಪ್ರಶಸ್ತಿ, ಗೌರವ ಹಾಗೂ ವ್ಯಕ್ತಿತ್ವ ಇವುಗಳನ್ನೆಲ್ಲ ಸೆರೆಹಿಡಿಯಲಾಗಿದೆ. ಯಾರ ಬಾಲ್ಯ ಜೀವನವು ವೈವಿಧ್ಯಮಯದಿಂದ ಅರ್ಥಪೂರ್ಣವಾಗಿ ಇರುವುದಿಲ್ಲವೋ ಅವರು ಸಾಹಿತಿಗಳಾಗಿ ಬೆಳೆಯುವುದು ದುಸ್ಥರ. ಡಾ. ಜಿ.ಬಿ.ವಿಸಾಜಿ ಅವರ ಬಾಲ್ಯ ಜೀವನ ವೈವಿಧ್ಯಪೂರ್ಣವಾದುದ್ದಾಗಿದೆ. ಅವರ ಮನೆ ಮತ್ತು ಸಮಾಜದಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಯ ಗಂಧಗಾಳಿ ಹರಡಿರುವುದನ್ನು ಕಾಣುತ್ತೇವೆ. ಅವರಿಗೆ ಉತ್ತಮ ಶಿಕ್ಷಕರಿಂದ ಶಿಕ್ಷಣ ದೊರಕಿದೆ. ಅವರ ವೃತ್ತಿ, ಅವರ ಸಾಹಿತ್ಯ ಜೀವನಕ್ಕೆ ಪೂರಕವಾಗಿದೆ. ಅವರ ಕುಟುಂಬದವರು ಅವರೊಬ್ಬ ಸಾಹಿತಿಗಳಾಗಿ ಬೆಳೆಯಲಿಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ. ಮುಂದೆ ಡಾ. ಜಿ.ಬಿ.ವಿಸಾಜಿ ಅವರ ಪುತ್ರ ವಿಕ್ರಮ ವಿಸಾಜಿ ಅವರು ಕೂಡ ಒಬ್ಬ ಸಾಹಿತಿಯಾಗಿ ಬೆಳೆದು ರಾಜ್ಯ ಮಟ್ಟದಲ್ಲಿ ಹೆಸರುಗಳಿಸಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡುತ್ತಿದ್ದಾರೆ.

See page 93

ಡಾ. ಜಿ.ಬಿ.ವಿಸಾಜಿ ಅವರು ಕನ್ನಡ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಇಲ್ಲಿಯವರೆಗೆ ೨೦ಕ್ಕೂ ಮೇಲ್ಪಟ್ಟು ಅವರ ಕೃತಿಗಳು ಹೊರಬಂದಿವೆ. ಈ ಪ್ರಬಂಧದಲ್ಲಿ ಅವರ ಸಮಗ್ರ ಸಾಹಿತ್ಯವನ್ನು ಕುರಿತು ವಿವೇಚಿಸಲಾಗಿದೆ. ಕಥಾ ಸಂಕಲನ, ಕವನ ಸಂಕಲನಗಳು, ಪ್ರಬಂಧ ಸಂಕಲನಗಳು, ಜೀವನ ಚರಿತ್ರೆಗಳು, ಸಂಪಾದನೆ ಸಾಹಿತ್ಯ ಸಂಶೋಧನ ಸಾಹಿತ್ಯ, ಪತ್ರಿಕೋದ್ಯಮ ಸಾಹಿತ್ಯ, ಹಸ್ತಪ್ರತಿ ಅಭಿಯಾನ ಇತರ ಸಾಹಿತ್ಯ ಮುಂತಾದ ಪ್ರಕಾರಗಳನ್ನು ವಿವರವಾಗಿ ವಿವೇಚಿಸಲಾಗಿದೆ. "ಲೋಕೋಭಿನ್ನರುಚಿಃ" ಎಂಬಂತೆ ಕೆಲವರು ಡಾ. ಜಿ.ಬಿ. ವಿಸಾಜಿ ಅವರ ಕಥೆಗಳನ್ನು ಮೆಚ್ಚಿಕೊಂಡರೆ ಇನ್ನು ಕೆಲವರು ಅವರ ಸಾಮರ್ಥ್ಯ ಕವನಗಳಲ್ಲಿದೆ ಎನ್ನುತ್ತಾರೆ. ಇನ್ನು ಕೆಲವರು ಅವರ ಚಿಂತನೆಗಳನ್ನು ಹಾಡಿಹೊಗಳುತ್ತಾರೆ ಮತ್ತೆ ಕೆಲವರಿಗೆ ಅವರ ಜೀವನ ಚರಿತ್ರೆಗಳು ದೀಪಸ್ತಂಬಗಳಾಗಿವೆ. ಅವರ ಸಂಪಾದನೆ ಸಾಹಿತ್ಯ ಇನ್ನು ಕೆಲವರಿಗೆ ಅಚ್ಚು-ಮೆಚ್ಚು ಅವರ ಪತ್ರಿಕೋದ್ಯಮ ಸಾಹಿತ್ಯ ಹಲವರನ್ನು ಬೆಳಕಿಗೆ ತಂದಿದೆ.

ಹಸ್ತಪ್ರತಿ ಅಭಿಯಾನ ಅವರ ಜೀವನದಲ್ಲಿ ಒಂದು ಮಹತ್ವಪೂರ್ಣ ಕಾರ್ಯವಾಗಿದೆ. ಇದರ ನಿಮಿತ್ಯವಾಗಿ ಇಡೀ ಬೀದರ ಜಿಲ್ಲೆ ತುಂಬ ತಿರುಗಾಡುವ ನಮ್ಮ ಸಾಂಪ್ರದಾಯಿಕ ಜ್ಞಾನ ರಾಶಿಯನ್ನು ಕೈಮುಟ್ಟಿ ನೋಡುವ ಭಾಗ್ಯ ಪ್ರತಿಯೊಂದು ತಾಲ್ಲೂಕಿನಲ್ಲಿ ಹತ್ತು ಹತ್ತು ಜನ ಸರ್ವೇಕ್ಷಕರನ್ನು ನೇಮಿಸಿ ಜಿಲ್ಲೆಯ ೫೦ ಜನ ಸರ್ವೇಕ್ಷಕರ ಮೇಲೆ ಸಂಯೋಜಕರಾಗಿ ಜಾಗೃತಿ ಸಭೆಗಳನ್ನು ನಡೆಸುವ ಭಿತ್ತಿಪತ್ರಗಳನ್ನು ಅಂಟಿಸುವ ಪತ್ರಿಕೆಗಳ ಮೂಲಕ ಪ್ರಸಾರ ಮಾಡುವ ತಾಡೋಲೆ, ಹಸ್ತಪ್ರತಿಗಳನ್ನು ಕ್ರಮವಾಗಿ ದಾಖಲಿಸಿಕೊಳ್ಳುವ ಪ್ರದರ್ಶಿಸುವ ಒಂದು ತಿಂಗಳ ಚಳವಳಿ ಡಾ. ಜಿ.ಬಿ. ವಿಸಾಜಿ ಅವರಿಗೆ ಹೊಸ ಹುರುಪನ್ನು ತಂದುಕೊಟ್ಟಿತು. ಅವರ ಸಂಘಟನಾ ಶಕ್ತಿಗೆ ಈ ಕಾರ್ಯ ಒಂದು ಓರೆಗಲ್ಲಾಗಿ ಪರಿಣಮಿಸಿತು. ಈ ಕಾರ್ಯ ಅವರ ಜೀವನದಲ್ಲಿ ತೃಪ್ತಿಯನ್ನು ತಂದುಕೊಟ್ಟ ಕಾರ್ಯವಾಗಿದೆ.

ಡಾ.ಜಿ.ಬಿ.ವಿಸಾಜಿ ಅವರು ಡಾ.ಬಸವರಾಜ ಮಲಶೆಟ್ಟಿ ಅವರ ಮಾರ್ಗದರ್ಶನದಲ್ಲಿ "ಶೂನ್ಯ ಸಂಪಾದನೆಗಳು ಒಂದು ತೌಲನಿಕ ಅಧ್ಯಯನ" ವಿಷಯ ಕುರಿತು ಪಿಎಚ್.ಡಿ. ಮಹಾಪ್ರಬಂಧ ರಚಿಸಿದ್ದಾರೆ. ರಚನೆಗಳನ್ನು ಸಂಭಾಷಣಾ ರೂಪದಲ್ಲಿ ಹೊಂದಿಸಿ ಪ್ರಭುದೇವರ ಜೀವನ ವೃತ್ತಾಂತ, ತತ್ವ, ಭೋದನೆಗಳನ್ನು ವಿವರಿಸುತ್ತಾ ಅನಿರ್ವಚನಿಯಗಳಾಗಿವೆ. ಶೂನ್ಯ ಸಂಪಾದನೆಯ ಅಧ್ಯಯನ ಎಂದರೆ ಲಿಂಗವಂತ ಧರ್ಮತತ್ವಗಳ ಅಧ್ಯಯನ ಎಂಬ ಅಭಿಪ್ರಾಯ ವಿಧ್ವಾಂಸರಲ್ಲಿ ಸಾಮಾನ್ಯವಾಗಿ ರೂಢಿಸಿಕೊಂಡಿವೆ. ಶೂನ್ಯ ಸಂಪಾದನೆ ಎಂದರೆ ಪರಿಪೂರ್ಣತೆಯ ಸಂಪಾದನೆ ಅದು ಬಯಲುಗಳಿಕೆ, ವಚನಗಳ ಮೂಲಕವೇ ಕಥೆಯನ್ನು ಹೊಮ್ಮಿಸಿದ್ದು ಶೂನ್ಯ ಸಂಪಾದನೆಯ ಗಮನಾರ್ಹ ಸಾಧನವಾಗಿದೆ. ಬಿಡಿ ಬಿಡಿ ವಚನಗಳನ್ನು ಪರಸ್ಪರ ಸಂಬಂಧಪಡೆಯಲು ಇಲ್ಲಿಯ ಗದ್ಯ ಭಾಗಗಳು ಕಾರಣವಾಗಿದೆ. ಈ ಗದ್ಯ ಭಾಗಗಳು ಶೂನ್ಯ ಸಂಪಾದನಕಾರರ ಜಾಣ್ಮೆಯನ್ನು ವ್ಯಕ್ತಪಡಿಸುತ್ತವೆ. ಲಿಂಗವಂತ ಧರ್ಮದ ವಿವಿಧ ತತ್ವ ಸಿದ್ದಾಂತಗಳನ್ನು ಚರ್ಚೆಯ ಮೂಲಕ ಪ್ರತಿಪಾದಿಸಬೇಕೆಂದು ಇಲ್ಲಿಯ ಹೊಸ ಹೊಸ ಅಧ್ಯಾಯಗಳ ಸೇರ್ಪಡೆಗೆ ಕಾರಣವಾಗಿದೆ. ಈ ಶೂನ್ಯ ಸಂಪಾದನೆಗಳು ಕನ್ನಡ ಸಾಹಿತ್ಯಕ್ಕೆ ಅಷ್ಟೇ ಅಲ್ಲ

ಭಾರತೀಯ ಸಾಹಿತ್ಯಕ್ಕೆ ಅಷ್ಟೇ ಏಕೆ ಜಾಗತಿಕ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಗಳಾಗಿವೆ. ಈ ಮಾದರಿಯ ವೃತ್ತಿಗಳು ಕನ್ನಡ ಸಾಹಿತ್ಯದಲ್ಲಿ ಮುಂದೆ ಹುಟ್ಟಿಬರಲಿಲ್ಲ.

ವಚನ ಸಾಹಿತ್ಯದ ಸಾರ ಸಂಗ್ರಹವನ್ನು ಒಳಗೊಂಡಿರುವ ಶೂನ್ಯ ಸಂಪಾದನೆಗಳ ಅಧ್ಯಯನವೆಂದರೆ ಪರೋಕ್ಷವಾಗಿ ಒಟ್ಟಾರೆ ವಚನ ಸಾಹಿತ್ಯವನ್ನು ಅಧ್ಯಯನ ಮಾಡಿದಂತೆ ಶೂನ್ಯ ಸಂಪಾದನೆಗಳಲ್ಲಿ ಶರಣರ ಸ್ವರ ವಚನಗಳನ್ನು ಬಳಸಲಾಗಿದೆ. ಶೂನ್ಯ ಸಂಪಾದನೆಗಳು ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಲಿಂಗಾಯತ ಧರ್ಮ ತತ್ವಗಳ ಪಠ್ಯ ಗ್ರಂಥವಾಗಿ ಸರ್ವಕಾಲಿಕ ಮಾನವೀಯ ಸಿದ್ಧಿ ಸಾಧನೆಗಳ ಅನ್ವೇಷಣೆಗೆ ವೇದಿಕೆಯಾಗಿ ಕನ್ನಡ ಸಾಹಿತ್ಯದಲ್ಲಿ ಶೂನ್ಯ ಸಂಪಾದನೆಗಳು ತಮ್ಮ ವಿಶಿಷ್ಟ ಸ್ಥಾನವನ್ನು ಉಳಿಸಿಕೊಂಡಿವೆ. ಮೊದಲೆ ಡಾ.ಜಿ.ಬಿ.ವಿಸಾಜಿ ಅವರಿಗೆ ವಚನ ಸಾಹಿತ್ಯದ ಮೇಲೆ ಅಪಾರ ಪ್ರೀತಿ ಇತ್ತು. ಈ ಶೂನ್ಯ ಸಂಪಾದನೆ ಒಂದು ತೌಲನಿಕ ಅಧ್ಯಯನ ಕಬ್ಬಿನ ಮೇಲೆ ಜೇನು ಇಟ್ಟಂತೆ, ಹಾಲಿನಲ್ಲಿ ಸಕ್ಕರೆ ಬೆರೆತಂತೆ ಸಂತೋಷವನ್ನುಂಟುಮಾಡಿದೆ.

ಪ್ರಸ್ತುತ ಪ್ರಬಂಧದ ಕೇಂದ್ರ ಬಿಂದುವಾದ ಡಾ.ಜಿ.ಬಿ.ವಿಸಾಜಿಯವರು ಕನ್ನಡ ಸಾಹಿತ್ಯ ಕಂಡ ವಿಶಿಷ್ಟ ಬರಹಗಾರರಾಗಿ ನಮ್ಮ ಗಮನ ಸೆಳೆಯುತ್ತಾರೆ. ಈ ಪ್ರಬಂಧದಲ್ಲಿ ಅವರ ಮನೆತನ ಅಲ್ಲಿನ ಪರಿಸರ, ಅವರ ಸಾಹಿತ್ಯ ಸೃಷ್ಟಿಗೆ ದೊರೆತಂಥ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ. ಇವರ ಬದುಕಿನ ಮೇಲೆ ಬೆಳಕು ಚೆಲ್ಲುವ ದೃಷ್ಟಿಯಿಂದ ಇವರನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಈ ಅಧ್ಯಯನದಲ್ಲಿ ಅವರ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಡಲಾಗಿದೆ. ಅವರದು ಸರಳ ಜೀವನ ಉದಾತ್ತ ಚಿಂತನ ಅವರು ಯಾವುದೇ ಗುಂಪುಗಾರಿಕೆಗೆ ಜೋತು ಬೀಳದೆ ಎಲ್ಲಿಯೇ ಒಳ್ಳೆಯದನ್ನು ಕಂಡರೆ ಅದನ್ನು ಮೆಚ್ಚುವ ಪರಿಶುದ್ಧ ಮನಸ್ಸಿನವರಾಗಿದ್ದಾರೆ. ವಿಶಾಲ ಮನೋಭಾವ ಉಳ್ಳವರಾಗಿದ್ದಾರೆ. ಅವರದು ಬಹುಮುಖ ವ್ಯಕ್ತಿತ್ವ, ಅವರು ಉತ್ತಮ ಸಂಘಟಕರು ಆಗಿದ್ದಾರೆ. ಅವರು ಉತ್ತಮ ವಾಗ್ಮಿಗಳಾಗಿದ್ದಾರೆ. ಬಾಲ್ಯದಿಂದ ಇಲ್ಲಿಯವರೆಗೆ ಅವರು ಮಾಡಿದ ಭಾಷಣಗಳಿಗೆ ಲೆಕ್ಕವಿಲ್ಲ ಅವರ ಹವ್ಯಾಸಗಳು ಅನೇಕ ಸಾಹಿತ್ಯ, ಸಂಗೀತ, ಚಿತ್ರಕಲೆ, ಪತ್ರಿಕೋದ್ಯಮ, ನಾಟಕ, ಚಲನಚಿತ್ರ ಮುಂತಾದವುಗಳಾಗಿವೆ. ರಾಜ್ಯ ಮತ್ತು ಹೊರರಾಜ್ಯಗಳಲ್ಲಿ ಅವರ ಸ್ನೇಹಿತರ ಬಳಗವಿದೆ. ಅವರು ಈಜು ಪ್ರೇಮಿಗಳು ಅವರು ಬಾಲಕರಿದ್ದಾಗ ಮುಂಜಾನೆಯಿಂದ ಸಂಜೆಯವರೆಗೆ ಬಾವಿಯ ಹತ್ತಿರ ಇಲ್ಲವೆ ನದಿಹತ್ತಿರ ಇರುತ್ತಿದ್ದರು. ಕುಸ್ತಿ ಪ್ರೇಮಿಗಳು ಅವರ ಕುಟುಂದವರಲ್ಲಿ ಅನೇಕರು ಕುಸ್ತಿಪಟುಗಳಾಗಿದ್ದರು. ಅವರೊಡನೆ ಜಾತ್ರೆಗಳಿಗೆ ಇವರು ಹೋಗುತ್ತಿದ್ದರು. ಮನೆಯಲ್ಲಿಯೇ ಕಿರಾಣಿ ಅಂಗಡಿ ಇತ್ತು. ಊರಿಗೆ ಅದು ಒಂದೇ ಅಂಗಡಿ. ಇವರಿಗೆ ವ್ಯಾಪಾರ ಮಾಡಿಯೂ ಗೊತ್ತಿದೆ. ಕೃಷಿ ಕಾರ್ಯದಲ್ಲಿ ಪಳಗಿದವರೂ ಸದಿ ಹೊಡೆಯುವುದೂ, ರಾಶಿ ಮಾಡುವುದೂ, ಬಾವಿ ತೋಡುವ ಕಾರ್ಯದಲ್ಲಿ ತೊಡಗುವುದು, ಮೆಣಸಿನ ಸಸಿಗಳನ್ನು ನೆಡುವುದು, ಮಾವಿನ ಗಿಡಗಳನ್ನು ಹಚ್ಚುವುದು ಮುಂತಾದ ಕಾರ್ಯಗಳಲ್ಲಿ ತೊಡಗಿದ್ದಾರೆ. ಇವರು ನಾಯಿ ಸಾಕುವುದರಲ್ಲಿಯೂ ಪ್ರವೀಣರು ಇವರು ಸಾಕಿದ ನಾಯಿ ಸುಂದರವಾಗಿತ್ತು. ಇವರು ಬಾಲ್ಯದಲ್ಲಿ ಮನೆಯಲ್ಲಾಗಲಿ ಹೊಲದಲ್ಲಾಗಲಿ ಅದನ್ನು ಅಗಲಿ ಇರುತ್ತಿರಲಿಲ್ಲ. ಇವರು ಸ್ನೇಹ ಜೀವಿ ಇವರಿಗೆ ಊರಲ್ಲಿಯೇ ನೂರಾರು ಗೆಳೆಯರಿದ್ದರು.

ಅದಕ್ಕಾಗಿ ಇವರು ಗೆಳೆಯರ ಬಳಗವನ್ನು ಕಟ್ಟಿದ್ದಾರೆ. ಇವರು ಅನೇಕ ಶಿಬಿರಗಳಲ್ಲಿ ಭಾಗವಹಿಸಿ ವಿಧ ವಿಧ ಅನುಭವಗಳನ್ನು ಅಭಿರುಚಿಗಳನ್ನು ಸಂಗ್ರಹಿಸಿದ್ದಾರೆ. ನಾಟಕ ಅಭಿರುಚಿ ಶಿಬಿರ, ಚಲನಚಿತ್ರ ಸಹೃದಯರ ಶಿಬಿರ ಮಕ್ಕಳ ಸಾಹಿತ್ಯ ಶಿಬಿರ ಪತ್ರಿಕೋದ್ಯಮ ಶಿಬಿರ, ಕನ್ನಡ ಬಾರದವರಿಗೆ ಕನ್ನಡ ಬೋಧನಾ ಶಿಬಿರ, ವಯಸ್ಕರ ಶಿಕ್ಷಣ ಶಿಬಿರ, ಎನ್.ಸಿ.ಸಿ. ಶಿಬಿರ ಮುಂತಾದವುಗಳಲ್ಲಿ ಕ್ರಿಯಾಶೀಲರಾಗಿ ಭಾಗವಹಿಸಿದ್ದಾರೆ.

ಪ್ರಸ್ತುತ ಪ್ರಬಂಧದಲ್ಲಿ ಆಕರ ಸಾಮಾಗ್ರಿ ಆಧಾರದೊಂದಿಗೆ ಹಾಗೂ ನನ್ನ ಜ್ಞಾನದ ಮಿತಿಯಲ್ಲಿ ಡಾ. ಜಿ.ಬಿ. ವಿಸಾಜಿ ಅವರ ಬದುಕು ಹಾಗೂ ಬರಹದ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದೇನೆ. ಸಂಶೋಧನೆ ಎಂಬುದು ನಿರಂತರ ಪ್ರಕ್ರಿಯೆ ಅದಕ್ಕೆ ಕೊನೆ ಎಂಬುದೇ ಇಲ್ಲ ಈ ಪ್ರಬಂಧ ಡಾ. ಜಿ.ಬಿ. ವಿಸಾಜಿಯವರನ್ನು ಅರಿಯಲು ಪ್ರೇರೆಪಿಸಿ ಅವರ ಹೆಚ್ಚಿನ ಅಧ್ಯಯನದಲ್ಲಿ ಓದುಗರನ್ನು ತೊಡಗಿಸುವಂತಾಗಲಿ ಈ ಪ್ರಬಂಧದಲ್ಲಿ ನನಗೆ ಕಂಡಷ್ಟು, ಕಂಡದ್ದು ನನ್ನ ಅಧ್ಯಯನದ ಅನುಭವದ ಮಿತಿಯಲ್ಲಿ ನನ್ನ ಸಂಶೋಧನೆಯ ವಿಚಾರಗಳು ಇಲ್ಲಿ ಸಾದರ ಪಡಿಸಲು ಪ್ರಯತ್ನಿಸಿದ್ದೇನೆ.

ಅಧ್ಯಾಯ–೭

## ಅನುಬಂಧ

- ಜೀವನದ ಪ್ರಮುಖ ಘಟನೆಗಳು
- ಭಾವಚಿತ್ರಗಳು
- ಗ್ರಂಥ ಋಣ

## ಅಧ್ಯಾಯ-೭

# ಜೀವನದ ಪ್ರಮುಖ ಘಟನೆಗಳು

೧) ಜನನ : ೦೫ನೇ ಜನೇವರಿ ೧೯೪೩
ಕೋಹಿನೂರ ತಾ. ಬಸವಕಲ್ಯಾಣ ಜಿ. ಬೀದರ

೨) ವಿದ್ಯಾಭ್ಯಾಸ:

- ಪ್ರಾಥಮಿಕ ಅಭ್ಯಾಸ ೧ ರಿಂದ ೪ನೇ ಇಯತ್ತೆವರೆಗೆ ಕೋಹಿನೂರನಲ್ಲಿ
- ೫,೬,೭ನೇ ಇಯತ್ತೆ ಮಾಧ್ಯಮಿಕ ಸರಕಾರಿ ಶಾಲೆ ವಜ್ರ ಸಲಗರನಲ್ಲಿ
- ಹೈಸ್ಕೂಲ ವಿದ್ಯಾಭ್ಯಾಸ ೮,೯,೧೦,೧೧ ಶ್ರೀ ಶರಣ ಬಸವೇಶ್ವರ ಪ್ರೌಢಶಾಲೆ ಗುಲಬರ್ಗಾ
- ಪದವಿ ಅಭ್ಯಾಸ ಸರಕಾರಿ ಪದವಿ ಮಹಾವಿದ್ಯಾಲಯ ಗುಲಬರ್ಗಾ ವರ್ಷ (೧೯೬೩)
- ಸ್ನಾತಕೋತ್ತರ ಪದವಿ ಅಭ್ಯಾಸ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ವರ್ಷ (೧೯೬೮)
- ಪಿಎಚ್.ಡಿ. ಪದವಿ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ ವರ್ಷ (೧೯೯೩)

೩) ಸೇವೆಗೆ ಸೇರಿದ್ದು :

- ೧೯೬೮ ಮುಖ್ಯಸ್ಥರು ಕನ್ನಡ ವಿಭಾಗ ಚನ್ನಬಸವೇಶ್ವರ ಮಹಾವಿದ್ಯಾಲಯ ಭಾಲ್ಕಿ

೪) ನಿವೃತ್ತಿ :

- ೨೦೦೧ ಜನೇವರಿ ೩೧ ರಂದು

೫) ಗೌರವ ಪ್ರಾಧ್ಯಾಪಕರು :

- ಕನ್ನಡ ಸ್ನಾತಕೋತ್ತರ ಕೇಂದ್ರ ಕರ್ನಾಟಕ ಮಹಾವಿದ್ಯಾಲಯ ಬೀದರ ವರ್ಷ ೨೦೦೧ ರಿಂದ ೨೦೦೪

೬) ಪ್ರಕಟಿತ ಪುಸ್ತಕಗಳು :

೧. ನೆಲದನುಡು–೧ (ಸಂಪಾದನೆ) ೧೯೬೬
೨. ನೆಲದನುಡಿ–೨ (ಸಂಪಾದನೆ) ೧೯೬೭
೩. ಅನಂತ ಸಂಗಮ (ಕಥಾ ಸಂಕಲನ) ೧೯೬೯
೪. ಶಾಂತಿಕಿರಣ (ಸಂಪಾದನೆ) ೧೯೭೦–೭೧
೫. ಮುಂಜಾವು (ಕವನ ಸಂಕಲನ) ೧೯೭೫
೬. ಸಾಹಿತ್ಯಾಲೋಕನ (ಪ್ರಬಂಧ ಸಂಕಲನ) ೧೯೭೫
೭. ವಿನಯ ಭಂಡಾರಿ (ಸಂಪಾದನೆ) ೧೯೭೭
೮. ಭಾವ ಬಿಂಬ (ಪ್ರಬಂಧ ಸಂಕಲನ) ೧೯೭೮
೯. ಉದಗೀರ ಸಂಗ್ರಾಮಪ್ಪನವರು (ವ್ಯಕ್ತಿಚಿತ್ರ) ೧೯೮೬
೧೦. ಭಾಲ್ಕಿ ತಾಲ್ಲೂಕು ದರ್ಶನ (ಪರಿಚಯ) ೧೯೮೬
೧೧.ಚಿಂತನ ದೀಪಿಕೆ (ಚಿಂತನೆಗಳ ಸಂಕಲನ) ೧೯೯೦
೧೨.ಶ್ರೀ ಚನ್ನಬಸವ ಪಟ್ಟದ್ದೇವರು (ವ್ಯಕ್ತಿಚಿತ್ರ) ೧೯೯೦
೧೩.ಹರಿಹರದೇವನ ನಾಲ್ಕು ರಗಳೆಗಳು (ಸಂಪಾದನೆ) ೧೯೯೨
೧೪.ಚೆಂಬೆಳಕು (ಸಂಪಾದನೆ) ೧೯೯೪
೧೫.ಕೊಳ್ಳೂರು ಹುಸನಾ ಸಾಹೇಬರು (ಗದ್ಯ) ೧೯೯೮
೧೬.ಅಲ್ಲಮ ಪ್ರಭುದೇವರ ವಚನಗಳು (ಸಂಪಾದನೆ) ೧೯೯೮
೧೮.ಮುಂಜಾವಿನಿಮದ ಮುಸ್ಸಂಜೆಯವರೆಗೆ (ಕವನ ಸಂಕಲನ) ೨೦೦೦
೧೯.ಬೆಳಕಿನೆಡೆಗೆ (ರೇಡಿಯೋ ಚಿಂತನಗಳ ಸಂಕಲನ) ೨೦೦೨
೨೦.ಸಾಲುದೀಪ (ಕಿರು ಪ್ರಬಂಧಗಳು) ೨೦೦೪
೨೧.ಕೇಶವರಾವ ನಿಟ್ಟೂರಕರ (ವ್ಯಕ್ತಿಚಿತ್ರ) ೨೦೦೬
೨೨.ಉರಿಲಿಂಗ ಪೆದ್ದಿ (ವ್ಯಕ್ತಿಚಿತ್ರ) ೨೦೦೬
೨೩.ಡಾ. ಚನ್ನಬಸವಪಟ್ಟದ್ದೇವರು (ವ್ಯಕ್ತಿಚಿತ್ರ) ೨೦೦೬
೨೪.ಹರಿಹರ (ಪರಿಚಯ) ೨೦೦೭
೨೫.ವಚನ ಸಂಪದ (ಲೇಖನಗಳ ಸಂಗ್ರಹ) ೨೦೦೮
೨೬.ಹಿರೇಮಠ ಸಂಸ್ಥಾನ ಭಾಲ್ಕಿ (ಪರಿಚಯ) ೨೦೦೮
೨೭.ಪೂಜ್ಯ ಚನ್ನಬಸವ ಪಟ್ಟದ್ದೇವರು (ವ್ಯಕ್ತಿಚಿತ್ರ) ೨೦೦೮

೭) ಪಠ್ಯಪುಸ್ತಕಗಳು :

೧) ಹರಿಹರದೇವನ ನಾಲ್ಕು ರಗಳೆಗಳು – ವರ್ಷ (೧೯೯೨ ರಿಂದ ೧೯೯೫) : ಬಿ.ಎ. ತೃತೀಯ (ಕನ್ನಡ ಐಚ್ಛಿಕ) ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಪಠ್ಯಪುಸ್ತಕ

೨) ಚನ್ನಬಸವ ಪಟ್ಟದ್ದೇವರು : ಪ್ರಕಟಣಾ ವರ್ಷ (೨೦೦೦ ರಿಂದ ೨೦೦೮) : ಬಿ.ಎ. ವಿದ್ಯಾರ್ಥಿಗಳಿಗೆ ನಾಂದೇಡ ಎಸ್.ಆರ್.ಟಿ. ಮರಾಠಾವಾಡಾ ವಿಶ್ವವಿದ್ಯಾಲಯಕ್ಕೆ ಪಠ್ಯಪುಸ್ತಕ.

೮) ಸಂಶೋಧನ :

"ಶೂನ್ಯ ಸಂಪಾದನೆ ಒಂದು ತೌಲನಿಕ ಅಧ್ಯಯನ" ಪಿಎಚ್.ಡಿ. ಪ್ರಬಂಧ (೨೯೯೩)

೯) ಭಾಗವಹಿಸಿದ ಕಮ್ಮಟಗಳು :

೧) ಬೆಂಗಳೂರಿನಲ್ಲಿ ಕರ್ನಾಟಕ ನಾಟಕ ಅಕಾಡಮಿ ನಡೆಸಿದ ನಾಟಕಾಭಿರುಚಿ ಶಿಬಿರ (೧೯೮೩)

೨) ಗುಲಬರ್ಗಾದಲ್ಲಿ ಕರ್ನಾಟಕ ಪತ್ರಿಕಾ ಅಕಾಡೆಮಿ ನಡೆಸಿದ ನಗರ ಹಾಗೂ ಗ್ರಾಮಾಂತರ ಪತ್ರಕರ್ತರ ತರಬೇತಿ ಶಿಬಿರ (೧೯೮೭)

೩) ಹೆಗ್ಗೋಡಿನಲ್ಲಿ ಚಲನ ಚಿತ್ರ ಸಹೃದಯತ ಶಿಬಿರ–(೩) (೧೯೮೧)

೪) ಗುಲಬರ್ಗಾದಲ್ಲಿ ಕನ್ನಡೇತರರಿಗೆ ಕನ್ನಡ ಕಲಿಸುವ ಬೋಧಕರ ತರಬೇತಿ ಶಿಬಿರ (೧೯೮೦)

೫) ಬೆಂಗಳೂರಿನಲ್ಲಿ ಮಕ್ಕಳ ಸಾಹಿತ್ಯ ಅಕಾಡೆಮಿಯಿಂದ ನಡೆದ ಮಕ್ಕಳ ಸಾಹಿತ್ಯ ಕಮ್ಮಟ (೧೯೮೭)

೬) ಬಸವಕಲ್ಯಾಣ ವಿದ್ಯಾಪೀಠದಲ್ಲಿ "ಬೀದರ ದೀಪ" ಪಠ್ಯ ರಚನಾ ಕಾರ್ಯಾಗಾರ (೧೯೯೨)

೮) ಮೈಸೂರು ವಿಶ್ವವಿದ್ಯಾಲಯದ ಶೈಕ್ಷಣಿಕ ಸಿಬ್ಬಂದಿ ಮಹಾವಿದ್ಯಾಲಯದ ಕನ್ನಡ ಅಧ್ಯಾಪಕರ ಪುನರ ನವೀಕರಣ ಶಿಕ್ಷಣ (೧೯೯೨)

೯) ಗುಲಬರ್ಗಾದಲ್ಲಿ ಎಸ್.ಎಸ್.ಎಲ್. ಕಾನೂನು ಕಾಲೇಜಿನಲ್ಲಿ ನಡೆದ ಆಡಳಿತ ಕನ್ನಡ ಕಾರ್ಯ ಶಿಬಿರ (೧೯೯೩)

೧೦) ಭಾರತೀಯ ಭಾಷಾ ಸಂಸ್ಥಾನ ಮೈಸೂರು ಅವರು ಗುಲಬರ್ಗಾ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ನಡೆಸಿದ ಕಾಲೇಜು ಭಾಷಾ ಅಧ್ಯಾಪಕರಿಗೆ ಭಾಷಾ ವಿಜ್ಞಾನ ತರಬೇತಿ ಶಿಬಿರ (೧೯೯೬)

೧೦) ಭಾಗವಹಿಸಿದ ಸಭೆ–ಸಮ್ಮೇಳನಗಳು

೧) ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ (೧೯೮೦)

೨) ಗದಗದಲ್ಲಿ ಕನ್ನಡ ಅಧ್ಯಯನ ಪೀಠದ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಅವರು ನಡೆಸಿದ ೭ನೇ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ

೩) ಗುಲಬರ್ಗಾ ಕನ್ನಡ ಸಾಹಿತ್ಯ ಪರಿಷತ್ತಿನಿಂದ ನಡೆದ ರಾಜ್ಯಮಟ್ಟದ ವಚನ ವಾಙ್ಮಯ ದರ್ಶನ ವಿಚಾರ ಸಂಕೀರಣದಲ್ಲಿ ಪ್ರಬಂಧ ಮಂಡನೆ (೧೯೮೦)

೪) ಕೊಪ್ಪಳದಲ್ಲಿ ನಡದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯಲ್ಲಿ ಕವಿತಾ ವಾಚನ (೧೯೯೩)

೫) ಬಸವಕಲ್ಯಾಣ ತಾಲ್ಲೂಕಾದ ಪ್ರಥಮ ಸಾಹಿತ್ಯ ಸಮ್ಮೆಳನದ ಪ್ರಥಮ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆ (೧೯೯೩)

೬) ಬೀದರದಲ್ಲಿ ನಡೆದ ಕನ್ನಡ ಭಾಷೆಯ ಪ್ರಾದೇಶಿಕ ಮತ್ತು ಸಾಂಸ್ಕೃತಿಕ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ (೨೦೦೦)

೭) ಮೈಸೂರು ದಸರಾ ಕವಿಗೋಷ್ಠಿ ೨೦೦೦ದಲ್ಲಿ ಕವನ ವಾಚನ

೮) ಬೀದರ ಜಿಲ್ಲಾ ೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆ (೨೦೦೧)

೯) ಬೀದರದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಂವಾದ ಗೋಷ್ಠಿಯಲ್ಲಿ (೨೦೦೬)

## ೧೧) ರೇಡಿಯೋ ಪ್ರಸಾರ :

ಆಕಾಶವಾಣಿ ಕೇಂದ್ರದಿಂದ ಚಿಂತನ, ಕವನವಾಚನ, ಪುಸ್ತಕ ಪರಿಚಯ, ವಿಚಾರ ಸಂಕಿರಣ, ಜಿಲ್ಲಾ ವಾರ್ತಾಪತ್ರ ಪ್ರಸಾರ.

## ೧೨) ಪತ್ರಿಕೋದ್ಯಮ :

೧) ಶಾಂತಿಕಿರಣ ದ್ವೈಮಾಸಿಕ ಪತ್ರಿಕೆಯ ಪ್ರಧಾನ ಸಂಪಾದಕರು (೧೯೭೧)

೨) ಪ್ರಜಾವಾಣಿ ಡೆಕ್ಕನ ಹೆರಾಲ್ಡ್ ಪತ್ರಿಕೆಗಳ ಭಾಲ್ಕಿ ತಾಲ್ಲೂಕಿನ ವರದಿಗಾರರು (೧೯೮೭–೨೦೦೩)

೩) ರಾಜೋಳೆ ಸಂಘರ್ಷ ಕನ್ನಡ ದಿನಪತ್ರಿಕೆಯ ಸಂಪಾದಕರು (೨೦೦೨–೨೦೦೩)

## ೧೩) ಸಾಮಾಜಿಕ ಸೇವೆ :

೧) ಕೊಹಿನೂರಿನಲ್ಲಿ ಗೆಳೆಯರ ಬಳಗ ಸ್ಥಾಪನೆ (೧೯೬೨)

೨) ಕರ್ನಾಟಕ ಮಕ್ಕಳ ಸಾಹಿತ್ಯ ಅಕಾಡೆಮಿ (ಬಿಜಾಪುರ) ಬೀದರ ಜಿಲ್ಲೆ ಅಧ್ಯಕ್ಷ (೧೯೮೭)

೩) ಗುಲಬರ್ಗಾ ಕನ್ನಡ ಅಧ್ಯಯನ ವೇದಿಕೆಯ ಉಪಾಧ್ಯಕ್ಷ (೧೯೭೭)

೪) ಕನ್ನಡ ಸಾಹಿತ್ಯ ಪರಿಷತ್ತು ತಾಲ್ಲೂಕು ಸಮಿತಿ ಭಾಲ್ಕಿಯ ಅಧ್ಯಕ್ಷ (೧೯೬೯)

೫) ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು ಜಾನಪದ ಸಮೀಕ್ಷೆ ಉಪಸಮಿತಿ ಸದಸ್ಯ (೧೯೮೪)

೬) ಭಾಲ್ಕಿ ಹಿರೇಮಠ ಸಂಸ್ಥಾನದ ಶಿವಾನುಭವಗೋಷ್ಠಿ ಹಾಗೂ ಶರಣ ಸಂಗಮದ ಸಂಚಾಲಕ (೧೯೮೫)

೭) ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸ ಮಂಡಲದ ಸದಸ್ಯ (೧೯೮೯–೧೯೯೧)

೮) ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನ ಅಜೀವ ಸದಸ್ಯರು

೯) ಬೀದರ ಜಿಲ್ಲಾ ವರದಿಗಾರರ ಸಂಘದ ಗೌರವಾಧ್ಯಕ್ಷ (೧೯೯೦)

೧೦) ನಾಂದೇಡದ ಸ್ವಾಮಿ ರಾಮಾನಂದ ತೀರ್ಥ ಮರಾಠವಾಡಾ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸ ಮಂಡಲದ ಸದಸ್ಯ (೧೯೯೦)

೧೧) ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಭಾಲ್ಕಿ ತಾಲ್ಲೂಕ ಸದಸ್ಯ (೧೯೯೯)

೧೨) ಮಕ್ಕಳ ಸಾಹಿತ್ಯ ವೇದಿಕೆಯ ಭಾಲ್ಕಿ ತಾಲ್ಲೂಕ ಅಧ್ಯಕ್ಷ (೨೦೦೧)

೧೩) ಡಾ. ಚನ್ನಬಸವ ಪಟ್ಟದ್ದೇವರ ಕನ್ನಡ ಸಂಘದ ಕಾರ್ಯಾಧ್ಯಕ್ಷರು (೨೦೦೧)

೧೪) ಧರಿನಾಡು ಕನ್ನಡ ಸಂಘ ತಾಲ್ಲೂಕು ಸಮಿತಿ ಭಾಲ್ಕಿಯ ಅಧ್ಯಕ್ಷರು (೨೦೦೩)
೧೫) ಬೀದರ ಜಿಲ್ಲಾ ಹಸ್ತಪ್ರತಿ ಅಭಿಯಾನದ ಸಂಯೋಜಕರು (೨೦೦೫)

೧೪) ಸನ್ಮಾನ :

೧) ಕರ್ನಾಟಕ ರಾಜ್ಯೋತ್ಸವ ದಿನದಂದು ಬೀದರದಲ್ಲಿ ಕನ್ನಡ ಸೇವೆಗಾಗಿ ಜಿಲ್ಲಾಧಿಕಾರಿಗಳಿಂದ ಶಾಲು ಹೊದಿಸಿ ಸನ್ಮಾನ ೧೯೮೬
೨) ಉದಗೀರದ ಸಂಗ್ರಾಮ ಡೇ ಸಮಾರಂಭದಲ್ಲಿ ಶಾಲು ಹೊದಿಸಿ ಸನ್ಮಾನ ೧೯೮೬
೩) ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಕನ್ನಡ ಸೇವೆಗಾಗಿ ಶಾಲು ಹೊದಿಸಿ ಸನ್ಮಾನ ೧೯೯೧
೪) ತಾಳಮಡಗಿಯಲ್ಲಿ (ಹುಮನಾಬಾದ ತಾಲ್ಲೂಕು) ಕನಕದಾಸರ ಜಯಂತಿ ಸಮಾರಂಭದಲ್ಲಿ ಶ್ರೀ ಸಿದ್ದಯ್ಯ ಒಡೆಯರ ಅವರಿಂದ ಶಾಲು ಹೊದಿಸಿ ಸನ್ಮಾನ ೧೯೯೧
೫) ಭಾಲ್ಕಿ ಹಿರೇಮಠ ಸಂಸ್ತಾನದಿಂದ ಡಾಕ್ಟರೇಟ ಪಡೆದುದ್ದಕ್ಕಾಗಿ ಶಾಲು ಹೊದಿಸಿ ಸನ್ಮಾನ ೧೯೯೩
೬) ಚಿಟಗುಪ್ಪಾ (ಹುಮನಾಬಾದ ತಾಲ್ಲೂಕು) ಸರಕಾರಿ ಪದವಿ ಪೂರ್ವ ಮಹಾವಿದ್ಯಾಲಯದ ವಾರ್ಷಿಕೋತ್ಸವದಲ್ಲಿ ಡಾಕ್ಟರೇಟ ಪಡೆದುದ್ದಕ್ಕಾಗಿ ಶಾಲು ಹೊದಿಸಿ ಸನ್ಮಾನ ೧೯೯೪
೭) ಕರ್ನಾಟಕ ರಾಜ್ಯೋತ್ಸವ ದಿನದಂದು ಭಾಲ್ಕಿಯಲ್ಲಿ ಕನ್ನಡ ಸೇವೆಗಾಗಿ ತಹಸಿಲ್ದಾರರಿಂದ ಶಾಲು ಹೊದಿಸಿ ಸನ್ಮಾನ ೧೯೯೬
೮) ನಾಲ್ವಾರ ಕೋರಿಸಿದ್ದೇಶ್ವರ ಸಂಸ್ಥಾನ ಮಠದಲ್ಲಿ ೧೦೨ನೆಯ ಶಿವಾನುಭವ ಚಿಂತನ ಗೋಷ್ಠಿಯಲ್ಲಿ ಪೂಜ್ಯರಿಂದ ಶಾಲು ಹೊದಿಸಿ ಸನ್ಮಾನ ೧೯೯೬
೯) ಗುಲಬರ್ಗಾದಲ್ಲಿ ಕನ್ನಡ ಪ್ರಾಧಿಕಾರ ವತಿಯಿಂದ ಕನ್ನಡ ಜಾಗೃತಿ ಸಮ್ಮೇಳನದಲ್ಲಿ ಕನ್ನಡ ಸೇವೆಗಾಗಿ ವಿಭಾಗಾಧಿಕಾರಿಗಳಿಂದ ಶಾಲು ಹೊದಿಸಿ ಸನ್ಮಾನ ೧೯೯೭
೧೦) ಶರಣ ಬಸವೇಶ್ವರ ಸಂಸ್ಥಾನದಿಮದ ಶಾಲು ಹೊದಿಸಿ ಸನ್ಮಾನ ೧೯೯೮
೧೧) ಭಾಲ್ಕಿ ಗ್ರಾಮೀಣ ಇಂಜನಿಯರಿಂಗ ಕಾಲೇಜು ಕರ್ನಾಟಕ ರಾಜ್ಯೋತ್ಸವ ದಿನದಂದು ಕನ್ನಡ ಸೇವೆಗಾಗಿ ಶಾಲು ಹೊದಿಸಿ ಸನ್ಮಾನ ೧೯೯೮
೧೨) ಭಾಲ್ಕಿ ಭಾತಂಬ್ರಾ ವಿರಕ್ತ ಪೀಠಾಧೀಶರಾದ ಶಿವಯೋಗೀಶ್ವರ ಮಹಾಸ್ವಾಮಿಜಿಯವರಿಂದ ಶಾಲು ಹೊದಿಸಿ ಸನ್ಮಾನ ೧೯೯೮
೧೩) ಭಾಲ್ಕಿ ಯೇಸು ನಿಲಯದ ಕೆಥೋಲಿಕ ಧರ್ಮ ಸಭೆಯ ಜಾತ್ರಾ ಉತ್ಸವದಲ್ಲಿ ಪ್ರಶಸ್ತಿ ಪತ್ರದೊಂದಿಗೆ ವಿಶೇಷ ಸೇವಾ ಸನ್ಮಾನ ೨೦೦೦
೧೪) ಹುಲಸೂರ ಗುರುಬಸವೇಶ್ವರ ಸಂಸ್ಥಾನ ಮಠದಲ್ಲಿ ಶಾಲು ಹೊದಿಸಿ ಸನ್ಮಾನ ೨೦೦೦
೧೫) ಚಿಟಗುಪ್ಪಾದ ಸ್ವಾಮಿ ಅಯ್ಯಪ್ಪ ಪದವಿ ಮಹಾವಿದ್ಯಾಲಯದಲ್ಲಿ ಶಾಲು ಹೊದಿಸಿ ಸನ್ಮಾನ ೨೦೦೩

೧೬) ಶ್ರೀ ಸಿದ್ಧಗಂಗಾ ಸಂಸ್ಥಾನ ಮಠದಿಂದ ಶಾಲು ಹೊದಿಸಿ ಸನ್ಮಾನ — ೨೦೦೩

೧೭) ಕುಶನೂರ ಮಠದ ಸ್ವಾಮಿಗಳವರಿಂದ ಶಾಲು ಹೊದಿಸಿ ಸನ್ಮಾನ — ೨೦೦೩

೧೮) ಕೊಹಿನೂರಿನ ಗಡಿನಾಡ ಉತ್ಸವದಲ್ಲಿ ಶಾಲು ಹೊದಿಸಿ ಸನ್ಮಾನ — ೨೦೦೩

೧೯) ಶ್ರೀ ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ ಬಸವಕಲ್ಯಾಣದಿಂದ "ಸಾಹಿತ್ಯ ರತ್ನ" ಪ್ರಶಸ್ತಿ — ೨೦೦೬

೨೦) ಪ್ರತಿಭಾವಂತ ಸಂಸದಿಯ ಪಟು ಬರಹಗಾರರೆಂದು ಮಾಜಿ ಮುಖ್ಯಮಂತ್ರಿ ಎನ್.ಧರ್ಮಸಿಂಗ ಅವರಿಂದ ಸನ್ಮಾನ — ೨೦೦೬

೨೧) ಶ್ರೀ ಪ್ರಭುದೇವರ ಸಂಸ್ಥಾನ ಮಠ ಸಂಡೂರು ಜಿಲ್ಲಾ ಬಳ್ಳಾರಿ ಅವರಿಂದ ಸನ್ಮಾನ — ೨೦೦೭



೨೦೦೧ ರಲ್ಲಿ ನಡೆದ ಬೀದರ ಜಿಲ್ಲಾ ೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ವಹಿಸಿದಾಗ ಡಾ.ಜಿ.ವಿ.ವಿಸಾಜಿ ದಂಪತಿಗಳಿಗೆ ಪರಿಷತ್ತಿನ ಪದಾಧಿಕಾರಿಗಳಿಂದ ಸನ್ಮಾನ



ಸಾಹಿತಿಗಳಾದ ಡಾ. ಜಿ.ಬಿ.ವಿಸಾಜಿ ಅವರೊಂದಿಗೆ ಅವರ ಧರ್ಮಪತ್ನಿ ಶ್ರೀಮತಿ ಕಲಾವತಿ ವಿಸಾಜಿ

## ಗ್ರಂಥ ಋಣ

| ೧. ಡಾ. ಜಿ.ಬಿ. ವಿಸಾಜಿ ಅವರ ಕೃತಿಗಳು | | | | |
|---|---|---|---|---|
| ಕ್ರ.ಸಂ | ಲೇಖಕರು | ಪುಸ್ತಕದ ಹೆಸರು | ಪ್ರಕಾಶನ | ವರ್ಷ |
| ೧. | ಡಾ.ಜಿ.ಬಿ. ವಿಸಾಜಿ | ಅನಂತ ಸಂಗಮ | ಗೆಳೆಯರಬಳಗ ಕೊಹಿನೂರ | ೧೯೬೯ |
| ೨. | ಡಾ.ಜಿ.ಬಿ. ವಿಸಾಜಿ | ಉದಗೀರ ಸಂಗ್ರಾಮಪ್ಪನವರು | ವೀರಶೈವ ಅಧ್ಯಯನ ಸಂಸ್ಥೆ, ಗದಗ | ೧೯೮೬ |
| ೩. | ಡಾ.ಜಿ.ಬಿ. ವಿಸಾಜಿ | ಉರಿಲಿಂಗ ಪೆದ್ದಿ | ಹೈದ್ರಾಬಾದ ಕರ್ನಾಟಕ ಅಭಿವೃದ್ಧಿ ವಿಭಾಗ ಸೇಡಂ | ೨೦೦೬ |
| ೪. | ಡಾ.ಜಿ.ಬಿ. ವಿಸಾಜಿ | ಕೊಳ್ಳೂರ ಹುಸನಾ ಸಾಹೇಬ (ಗದ್ಯ) | ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ | ೧೯೯೮ |
| ೫. | ಡಾ.ಜಿ.ಬಿ. ವಿಸಾಜಿ | ಕೊಳ್ಳೂರ ಹುಸನಾ ಸಾಹೇಬ (ಪದ್ಯ) | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೮ |
| ೬. | ಡಾ.ಜಿ.ಬಿ. ವಿಸಾಜಿ | ಚಿಂತನ ದೀಪಿಕೆ | ಬಸವಧರ್ಮ ಪ್ರಚಾರ ಸಂಸ್ಥೆ, ಹಿರೇಮಠ ಭಾಲ್ಕಿ | ೧೯೯೦ |
| ೭. | ಡಾ.ಜಿ.ಬಿ. ವಿಸಾಜಿ | ಡಾ. ಚನ್ನಬಸವ ಪಟ್ಟದ್ದೇವರು | ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಂ | ೨೦೦೬ |
| ೮. | ಡಾ.ಜಿ.ಬಿ. ವಿಸಾಜಿ | ಭಾಲ್ಕಿ ತಾಲ್ಲೂಕ ದರ್ಶನ | ಐ.ಬಿ.ಎಚ್. ಪ್ರಕಾಶನ, ಬೆಂಗಳೂರು | ೧೯೮೭ |
| ೯. | ಡಾ.ಜಿ.ಬಿ. ವಿಸಾಜಿ | ಭಾವಬಿಂಬ | ವಿಕ್ರಮ ಪ್ರಕಾಶನ, ಭಾಲ್ಕಿ | ೧೯೭೮ |
| ೧೦. | ಡಾ.ಜಿ.ಬಿ. ವಿಸಾಜಿ | ಬೆಳಕಿನೆಡೆಗೆ | ನೆಲದನುಡಿ ಪ್ರಕಾಶನ, ಭಾಲ್ಕಿ | ೨೦೦೨ |
| ೧೧ | ಡಾ.ಜಿ.ಬಿ. ವಿಸಾಜಿ | ಮುಂಜಾವಿನಿಂದ ಮುಸ್ಸಂಜೆಯವರೆಗೆ | ನೆಲದನುಡಿ ಪ್ರಕಾಶನ, ಭಾಲ್ಕಿ | ೨೦೦೦ |
| ೧೨ | ಡಾ.ಜಿ.ಬಿ. ವಿಸಾಜಿ | ಮುಂಜಾವು | ಗೆಳೆಯರ ಬಳಗ, ಕೋಹಿನೂರ | ೧೯೭೫ |
| ೧೩ | ಡಾ.ಜಿ.ಬಿ. ವಿಸಾಜಿ | ಶ್ರೀ ಕೇಶವರಾವ ನಿಟ್ಟೂರಕರ | ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ, ಬೆಂಗಳೂರು | ೨೦೦೬ |
| ೧೪ | ಡಾ.ಜಿ.ಬಿ. ವಿಸಾಜಿ | ಶ್ರೀ ಚನ್ನಬಸವ ಪಟ್ಟದ್ದೇವರು | ಬಸವಧರ್ಮ ಪ್ರಚಾರ ಸಂಸ್ಥೆ ಹಿರೇಮಠ, ಭಾಲ್ಕಿ | ೧೯೯೦ |
| ೧೫ | ಡಾ.ಜಿ.ಬಿ. ವಿಸಾಜಿ | ಶೂನ್ಯ ಸಂಪಾದನೆಗಳು ಒಂದು ತೌಲನಿಕ ಅಧ್ಯಯನ | ಅಪ್ರಕಟಿತ ಪಿಎಚ್.ಡಿ ಪ್ರಬಂಧ | ೧೯೯೨ |
| ೧೬ | ಡಾ.ಜಿ.ಬಿ. ವಿಸಾಜಿ | ಸಾಲುದೀಪ | ಕಲಾನಿಕೇತನ ಪ್ರಕಾಶನ, ಬಸವಕಲ್ಯಾಣ | ೨೦೦೪ |

| | | | | |
|---|---|---|---|---|
| ೧೭ | ಡಾ.ಜಿ.ಬಿ. ವಿಸಾಜಿ | ಸಾಹಿತ್ಯಾಲೋಕನ | ರಸವಂತಿ ಪ್ರಕಾಶನ, ಭಾಲ್ಕಿ | ೧೯೭೫ |
| ೧೮ | ಡಾ.ಜಿ.ಬಿ. ವಿಸಾಜಿ | ಹರಿಹರ | ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ, ಗುಲಬರ್ಗಾ | ೨೦೦೭ |
| ೧೯ | ಡಾ.ಜಿ.ಬಿ. ವಿಸಾಜಿ | ಅಲ್ಲಮ ಪ್ರಭುದೇವರ ವಚನಗಳು | ಕಲ್ಯಾಣ ಕರ್ನಾಟಕ ಪ್ರಕಾಶನ, ಬೀದರ | ೧೯೯೮ |
| ೨೦ | ಡಾ.ಜಿ.ಬಿ. ವಿಸಾಜಿ | ಚೆಂಬೆಳಕು | ಜಿಲ್ಲಾ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬೀದರ | ೧೯೯೪ |
| ೨೧ | ಡಾ.ಜಿ.ಬಿ. ವಿಸಾಜಿ | ನೆಲದನುಡಿ–೧ | ಗೆಳೆಯರ ಬಳಗ, ಕೋಹಿನೂರ | ೧೯೬೬ |
| ೨೨ | ಡಾ.ಜಿ.ಬಿ. ವಿಸಾಜಿ | ನೆಲದನುಡಿ–೨ | ಗೆಳೆಯರ ಬಳಗ, ಕೋಹಿನೂರ | ೧೯೬೭ |
| ೨೩ | ಡಾ.ಜಿ.ಬಿ. ವಿಸಾಜಿ | ವಿನಯ ಭಂಡಾರಿ | ಪ್ರಕೃತಿ ಪ್ರಕಾಶನ ಭಾಲ್ಕಿ | ೧೯೭೭ |
| ೨೪ | ಡಾ.ಜಿ.ಬಿ. ವಿಸಾಜಿ | ಹರಿಹರದೇವನ ನಾಲ್ಕು ರಗಳೆಗಳು | ಬಸವ ಪ್ರಕಾಶನ ಕಲಬುರ್ಗಿ | ೧೯೯೨ |
| **೨) ಡಾ. ಜಿ.ಬಿ. ವಿಸಾಜಿ ಅವರ ಕುರಿತು ಬಂದ ಕೃತಿಗಳು** | | | | |
| ೦೧) | ಖಡ್ಕೆ ಎಚ್.ಸಿ. | ಡಾ.ಜಿ.ಬಿ. ವಿಸಾಜಿ ಅವರ ಬದುಕು ಬರಹ | ಖಡ್ಕೆ ಪತ್ರಿಕೆ ಪ್ರಕಾಶನ | ೧೯೯೯ |
| ೦೨) | ದೇಶಾಂತ ಹುಡಗಿ | ಕನ್ನಡದ ದೀಪ | ಡಾ.ಜಿ.ಬಿ.ವಿಸಾಜಿ ಅಭಿನಂದನಾ ಗ್ರಂಥ ಸಮಿತಿ ಬೀದರ | ೨೦೦೬ |
| **೩) ಇತರೆ ಕೃತಿಗಳು** | | | | |
| ೦೧ | ಗವಿಸಿದ್ದಪ್ಪ ಎಚ್. ಪಾಟೀಲ | ಕಲ್ಯಾಣ ಕರ್ನಾಟಕದ ಸಾಹತಿಗಳ ಬದುಕು ಬರಹ | ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ ಗುಲಬರ್ಗಾ | ೨೦೦೨ |
| ೦೨ | ಗಿರಿರಾಜ ಹೊಸಮನಿ | ಷಡಕ್ಷರ | ಷಡಕ್ಷರ ಅಭಿನಂದನಾ ಸಮಿತಿ, ಲಿಂಗಸೂರ | ೨೦೦೧ |
| ೦೩ | ಚಿತ್ಕಳಾ ಜಿ.ಎಂ. | ಬೀದರ ಜಿಲ್ಲೆಯ ಸೃಜನೇತರ ಸಾಹಿತ್ಯ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು | ೨೦೦೬ |
| ೦೪ | ನೀಲಾ ಪಾಟೀಲ | ಕನ್ನಡ ಸಾಹಿತಿಗಳ ಮಾಹಿತಿ | ಸಂಕ್ರಮಣ ಪ್ರಕಾಶನ | ೨೦೦೩ |
| ೦೫ | ಮರುಳಯ್ಯ ಸಾ.ಶಿ | ವಿದ್ಯಾಶ್ರೀ | ಕರ್ನಾಟಕ ವೀರಶೈವ ವಿದ್ಯಾಬಿವೃದ್ಧಿ ಸಂಸ್ಥೆ, ಬೆಂಗಳೂರು | ೨೦೦೫ |
| ೦೬ | ರಮೇಶ ಸ.ಚಿ. | ಶಬ್ದಾಂಜಲಿ | ಅಂಶು ಪ್ರಕಾಶನ ಸದಾಶಿವನಗರ ಹೊಸಪೇಟೆ | ೨೦೦೧ |
| ೦೭ | ರಾಮಕೃಷ್ಣ ಮರಾಠೆ | ದಾಸೋಹ | ಪರಮಪೂಜ್ಯ ಶಿವಬಸವ ಸ್ವಾಮಿಗಳು ಬೆಳಗಾವಿ | ೨೦೦೭ |
| ೦೮ | ವೃಷಬೇಂದ್ರ ಸ್ವಾಮಿ | ಉತ್ತರ ಕರ್ನಾಟಕದ | ಪ್ರಸಾರಂಗ ಕ. ವಿಶ್ವವಿದ್ಯಾಲಯ | ೧೯೮೨ |

| | ಎಸ್.ಎಂ. | ಆಯಗಾರರು | ಧಾರವಾಡ | |
|---|---|---|---|---|
| ೦೯ | ಶಾಶ್ವತ ಸ್ವಾಮಿ | ಮುತ್ತಿನ ಪೆಂಡ | ಸ್ವಾಗತ ಸಮಿತಿ ಡಾ. ಶಿವಮೂರ್ತಿ ಶಿವಾಚಾರ್ಯ ರಾಯಚೂರು | ೨೦೦೬ |
| ೧೦ | ಶಾಸ್ತ್ರಿ ಪಿ.ವ್ಹಿ. | ಸಾಹಿತ್ಯದ ಪ್ರಕಾರಗಳು | ಸಮಾಜ ಪುಸ್ತಕಾಲಯ ಧಾರವಾಡ | ೧೯೭೩ |
| ೧೧ | ಶ್ರೀನಿವಾಸ ಕುಲಕರ್ಣಿ | ಹೋರಾಟ | ಶ್ರೀ ರಾಘವೇಂದ್ರ ಜೋಶಿ ಮಹೋತ್ಸವ ಸಮಿತಿ ಬೆಳಗಾವಿ | ೨೦೦೩ |
| ೧೨ | ಶೇಷಗಿರಿರಾವ ಎಲ್.ಎಸ್. | ಹೊಸಗನ್ನಡ ಸಾಹಿತ್ಯ ಚರಿತ್ರೆ | ಅಂಕಿತ ಪ್ರಕಾಶನ, ಬೆಂಗಳೂರು | ೧೯೯೯ |
| ೧೩ | ಸತ್ಯಮೂರ್ತಿ ಬಿ.ಜಿ. | ಸಾಹಿತಿ ಮಾಹಿತಿ ಕೋಶ | ಸೋಮೇಶ್ವರ ಬಡಾವಣೆ ಬೆಂಗಳೂರು | ೨೦೦೬ |
| ೧೪ | ಸಿದ್ಧಲಿಂಗ ಪಟ್ಟಣಶೆಟ್ಟಿ | ಕಲ್ಯಾಣದ ಹಾದಿ | ಜಗದ್ಗುರು ತೋಂಟದಾರ್ಯ ಮಠ ಗದಗ | ೧೯೯೯ |

